ನಾಡಿಯ ಹೊತ್ತಿಗೆ

# ಜೀವನರಂಗ



ಬರೆದವರು:

ಶ್ರೀರಂಗರು



ಸರಸ್ವತಿ ನಿಲಯ ಧಾರವಾಡ

೧೯೫೪

# ಜೀವನ ರಂಗದ

## ಹೊಸತಿಲಲ್ಲಿ—

ಶ್ರೀರಂಗರ ನಾಟಕಗಳ ಈ ಸಂಗ್ರಹವನ್ನು ಪ್ರಕಟಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತಿದೆ. ಶ್ರೀರಂಗರ ನಾಟಕಗಳು ಕನ್ನಡದ ಸಾಹಿತ್ಯದಲ್ಲಿ ಅನೇಕ ಜೀವನರಂಗದಲ್ಲೂ ಹೊಸತೊಂದು ಹಾದಿಯನ್ನು ನಿರ್ಮಾಣ ಮಾಡಿದುವೆಂಬುದನ್ನು ಅವರ ಹಗೆಗಳಿಗೆ ಕೂಡ ಒಪ್ಪಿಕೊಳ್ಳದೆ ಗತಿಯಿಲ್ಲ. ಇಂಥ ಮಹತ್ವದ ನಾಟಕಗಳ (ಒಂದು) ಸಂಗ್ರಹವನ್ನು ಬೆಳಕಿಗೆ ತರುವ ಸಂದರ್ಭವು ನಮಗೆ ದೊರೆತುದಕ್ಕಾಗಿ ನಮ್ಮನ್ನೇ ನಾವು ಅಭಿನಂದಿಸಿ ಕೊಳ್ಳುತ್ತೇವೆ.

ಈ ನಾಟಕಗಳ ಸಂಗ್ರಹವು ಪ್ರಾಚಾರ್ಯ ಗೋಕಾಕ ವಿನಾಯಕ ರಾಯರ ವಿಮರ್ಶಾತ್ಮಕ ಮುನ್ನುಡಿಯ ಮೂಲಕ ಅತ್ಯಂತ ಅಮೌಲಿಕವಾಗಿದೆ. ಏಕೆಂದರೆ ಶ್ರೀರಂಗರ ನಾಟಕಗಳ ಅಂತರ್ಬಾಹ್ಯ ಸೌಂದರ್ಯವನ್ನು ಈ ತೆರನಾಗಿ ತೂಕದಿಂದ ತಿಳಿಯಾಗಿ ವಿವರಿಸಿದ ಶ್ರೇಯಸ್ಸು ಶ್ರೀ ವಿನಾಯಕರಾಯರಿಗೆ ಇದೆ. ಈ ಮುನ್ನುಡಿಯು ಶ್ರೀ ವಿನಾಯಕರಾಯರ ಆಳವಾದ ಅಭ್ಯಾಸದ ರೀತಿ, ಮೂಲಗ್ರಾಹಿಯಾದ ರಸವಿಮರ್ಶಕ ದೃಷ್ಟಿ, ಹಿತವಾದ ಮಿತವಾದ ರೀತಿಯಿಂದ ವಿಚಾರಗಳನ್ನು ಹೇಳುವ ಬಗೆ ಮೊದಲಾದ ಗುಣಗಳಿಗಾಗಿ ಒಂದು ಆದರ್ಶವೆ ಆಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ಮುನ್ನುಡಿಯು ಶ್ರೀರಂಗರ ನಾಟಕಗಳನ್ನು ಹೇಗೆ ಅಭ್ಯಾಸ ಮಾಡಬೇಕೆಂಬುದಕ್ಕೆ ಮಾದರಿಯಾಗಿದೆ. ಇಂಥ ಈ ಮುನ್ನುಡಿ ಬರೆದುದಕ್ಕಾಗಿ ನಾವಂತೂ ಸರಿಯೇ, ಕನ್ನಡ ಸಾಹಿತ್ಯದ ಅಭ್ಯಾಸಿಗಳೂ ಶ್ರೀಮಾನ್ ವಿನಾಯಕರಾಯರನ್ನು ಕೊಂಡಾಡದೆ ಇರಲಾರರು.

ಅದರಂತೆ ಶ್ರೀಮಾನ ಎಸ್ಸ್ ( ಕುಲಕರ್ಣಿ M. A. ) ಇವರಿಗೂ ನಾವು ನಮ್ಮ ಅಭಿನಂದನೆಗಳನ್ನು ಸಲ್ಲಿಸದೆ ಇರಲಾರೆವು. ವಿಚಾರ-ಪ್ರಚೋದಕವಾದ ಟಿಪ್ಪಣಿಗಳನ್ನು ಬರೆದುಕೊಟ್ಟುದರಿಂದ ನಮ್ಮ ಈ ಪ್ರಕಟನೆಗೆ

ಹೆಚ್ಚಿನ ಮೆರಗು ಉಂಟಾಗಿದೆ. ಈ ಬಗೆಯಾಗಿ ವಿಮರ್ಶೆ, ಟಿಪ್ಪಣಿಗಳೊಂದಿಗೆ ಈ ಗ್ರಂಥವು ಪ್ರಕಟವಾಗಿರುವುದರಿಂದ ಶಾಲೆ, ಕಾಲೇಜಿನ ವಿದ್ಯಾರ್ಥಿ ವೃಂದಕ್ಕೆ ಸಾಹಿತ್ಯದ ಆಳವಾದ ಅಭ್ಯಾಸಕ್ಕೆ ತುಂಬ ಅನುಕೂಲವಾಗುವುದೆಂದು ಬೇರೆ ಹೇಳಬೇಕಾಗಿಲ್ಲ

**೧ ಮನೆಬೆಳಕು, ೨ ಹಾದಿಯಹೊತ್ತಿಗೆ, ೩ ಮಕ್ಕಳ ಹಿಗ್ಗು** ಈ ಮಾಲೆಗಳು, 'ಕನ್ನಡಿಗರಲ್ಲಿ ಸದಭಿರುಚಿಯನ್ನುಂಟುಮಾಡುವ, ಅಥವಾ ಸದ್ವಿಚಾರ ಪ್ರಚೋದಕವಾದ' ಇಲ್ಲವೆ ರಸಾನುಭೂತಿಯ ಆನಂದವನ್ನಿತ್ತು ಸಂಸ್ಕೃತಿಯ ಮಟ್ಟವನ್ನು ಹೆಚ್ಚಿಸಿ, ಜೀವನರಂಗದಲ್ಲಿ ಕನ್ನಡಿಗರು ಹಿರಿಮೆಯವರಾಗಿ ಮೆರೆಯುವದಕ್ಕೆ ಪೋಷಕವಾಗುವ 'ಉತ್ತಮೋತ್ತಮ ಗ್ರಂಥಗಳನ್ನೇ' ಬೆಳಕಿಗೆ ತರುತ್ತಿರುವುವೆಂದು ಹೊಗಳಿ ಕೆಲವರು ಪತ್ರ ಬರೆದಿರುವರು. ಹಲವು ಪತ್ರಿಕಾಕಾರರೂ, ವಿಮರ್ಶಕರೂ, ನಮ್ಮ ಮಾಲೆಗಳಿಗೆ ತಮ್ಮ ಸಂಪೂರ್ಣ ಬೆಂಬಲವನ್ನಿತ್ತು ಪ್ರೋತ್ಸಾಹಿಸಿರುವರು. ಅದಕ್ಕಾಗಿ ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳನ್ನು ಸಲ್ಲಿಸದೆ ಇರಲಾರೆವು.

ಕನ್ನಡ ವಾಚಕವೃಂದವು ಉದಾರಾಶ್ರಯವನ್ನಿತ್ತು ಪ್ರೋತ್ಸಾಹಿಸಿದಂತೆ ನಾವೂ ಅವರಿಗೆ ನಮ್ಮ ಕೈಲಾದ ಸೇವೆಯನ್ನು ಸಮರ್ಪಿಸಬೇಕೆಂದಿದ್ದೇವೆ.

ಧಾರವಾಡ
೨೫—೧೦—೪೩

**ಕೇ. ಗೋವಿಂದರಾಯ**

# ಮುನ್ನುಡಿ

## (೧)

ಈ ನಾಲ್ಕು ಏಕಾಂಕ ದೃಶ್ಯಗಳನ್ನು ಕುರಿತು ಕೆಲವು ಮಾತುಗಳನ್ನು ಬರೆಯಬೇಕೆಂದು ಸೂಚನೆ ಬಂದಾಗ ನಾನು ಸಂತೋಷದಿಂದ ಒಪ್ಪಿಕೊಂಡೆ. ಪ್ರೊ. ಜಾಗಿರದಾರರ ಕಲೆಯು ಇಲ್ಲಿ ಚಲ್ಲವರಿದಿದೆ; ಹೊಸತಾದ ಅನೇಕ ತಂತ್ರಚಾತುರ್ಯಗಳನ್ನು ಅದು ಸೇರ್ಪಡಿಸಿಕೊಂಡಿದೆ. ಅಲ್ಲದೆ ಅವರ ಕಲಾದೃಷ್ಟಿಯೇ ಇಲ್ಲಿ ಬೇರೆ ಪಥವಾಗಿ ಅರಳಿದೆ.

ಜಾಗಿರದಾರರ ಕೃತಿಗಳಲ್ಲಿ ಮೂರು ಗುಣಗಳು ಮೊದಲಿನಿಂದ ಮುಪ್ಪುರಿಗೊಂಡು ಬಂದಿವೆ. ಕಟು ವಿಡಂಬನೆ; ನೂತನ ಸೃಷ್ಟಿಯು ನಿರ್ಮಾಣದಲ್ಲಿಯೇ— ಅದರ ಸನ್ನಿವೇಶ-ಪಾತ್ರ-ಸಂಭಾಷಣೆಗಳ ನಿರ್ವಹಣದಲ್ಲಿಯೇ—ನಾಟಕಕಾರನಿಗೆ ನಿಲುಕುವ ಕಲಾಪೂರ್ಣ ವಾಸ್ತವಿಕತೆ; ಹಾಗು ಕಾವ್ಯಮಯವಾಗಿ ಗದ್ಯದಲ್ಲಿ ಮತ್ತು ಚಿತ್ರವಿಚಿತ್ರವಾಗಿ ವಾಸ್ತವಿಕ ಸೃಷ್ಟಿಯಲ್ಲಿ ಕಾಣಿಸಿಕೊಳ್ಳುವ ಚಮತ್ಕೃತಿ ( fantasy ) ಇಲ್ಲವೆ ಚಿತ್ರಶಕ್ತಿ ( fancy ); ಇವೇ ಆ ಮೂರು ಗುಣಗಳು. ಜಾಗಿರದಾರರು ನಾಟಕ ಬರೆಯಲು ಸುರುವು ಮಾಡಿದಾಗ ಕಟು ವಿಡಂಬನೆಯೇ ಅವರ ಕೃತಿಗಳ ಜೀವಾಳವಾಗಿತ್ತು; ಉಳಿದೆರಡು ಗುಣಗಳು ಮರೆಯಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿದ್ದವು. ಮುಂದೆ ಅವರು ಬರೆಯಲೆಸಗಿದ ಏಕಾಂಕ ದೃಶ್ಯಗಳಲ್ಲಿ ವಿಡಂಬನೆ ಹಾಗು ಚಿತ್ರಶಕ್ತಿಗಳ ನಡುವೆ ತಾಕಲಾಟವಾಗುವಷ್ಟರ ಮಟ್ಟಿಗೆ ಚಿತ್ರಶಕ್ತಿಯು ಅವರ ಕೃತಿಗಳಲ್ಲಿ ಬೆಳೆಯಿತು. ಅಶ್ವಮೇಧ, ಅಹಲ್ಯೋದ್ಧಾರ, ಇವೇ ಮೊದಲಾದ ಕೃತಿಗಳಲ್ಲಿ ಅದು ನಮ್ಮ ನಿದರ್ಶನಕ್ಕೆ ಬರುವದು. ಇತ್ತೀಚೆಗೆ-ವಿಶೇಷತಃ ಇಲ್ಲಿಯ ನಾಲ್ಕು ದೃಶ್ಯಗಳಲ್ಲಿ-ಇನ್ನೊಂದು ಬೆಳವಣಿಗೆಯು ಎದ್ದು ಕಾಣುತ್ತದೆ. ಇಂದಿನ ತ್ರಿಶಂಕು ನವಾಬನನ್ನು ನೋಡಿ ಮನಸ್ಸಿನಲ್ಲಿ ಜನಿಸಿದ ಶೋಕ, ರೋಷ, ಕರುಣೆ,

ವಿನೋದ; ಜಗತ್ತಿನ ಅಪೂರ್ಣತೆ ವಿಷಮತೆಗಳ ದರ್ಶನದಿಂದ ಉದ್ಭವಿಸಿದ ಆಳವಾದ ಕರುಣಹಾಸ್ಯ; ನಾಳೆ ಬರಬೇಕಾದ ಹೊಸ ಸಮಾಜದ ಬಗ್ಗೆ ಪ್ರೀತಿ, ತಿಳಿವು, ಅಭಿಮಾನ; ಇವನ್ನೆಲ್ಲ ಒಳಪಡಿಸಿಕೊಂಡು ಕಲಾದೃಷ್ಟಿಯನ್ನು ತಮ್ಮ ಕೃತಿಗಳಲ್ಲಿ ಅರಳಿಸಿ ತೋರಿಸುವದೇ ಈಗ ಜಾಗಿರದಾರರ ಸ್ಫೂರ್ತಿಯು ತವರಾಗಿದೆ. ಕೃತಿಗಳಲ್ಲಿ—ಈಗ ವಿಡಂಬನೆ—ಬರಬಹುದು; ಆದರೆ ಅದು ಈ ದೃಷ್ಟಿಗೆ ಅಧೀನವಾಗಿ ಮಾತ್ರ ಬರುತ್ತದೆ. ಚಿತ್ರಶಕ್ತಿಯು ಈಗಲೂ ಕೃತಿಯುದ್ದಕ್ಕೆ ಚಮಕಿಸಬಹುದು; ಆದರೆ ಅದು ಕಾಣಿಸಿಕೊಳ್ಳುವದು ಈ ದೃಷ್ಟಿಯನ್ನು ಸ್ಪಷ್ಟಗೊಳಿಸಲೆಂದು. ಜನರನ್ನು ರೇಗಿಸಿ-ರೇಗಿಸುವದರಲ್ಲಿಯೇ ಕಲೆಯನ್ನು ಕಾಣುವ ವಿಡಂಬನೆಯು ಈಗ ಮರೆಯಾಗಿದೆ. ಗಹಗಹಿಸಿ ನಕ್ಕು ಪುರಾಣಗಳನ್ನೇ ಬುಡಮೇಲಾಗಿ ಮಾಡಿ ಜನರನ್ನು ಹೆದರಿಸಿ-ಹೆದರಿಸುವದರಲ್ಲಿಯೇ ರಸವಂತಿಕೆಯನ್ನು ಕಾಣುವ ಚಿತ್ರಶಕ್ತಿಯೂ ಈಗ ಹವಣಿಗೆ ಬಂದಿದೆ. ಕಲೋಪಾಸಕನ ದರ್ಶನವೊಂದು ಈಗ ಜಾಗಿರದಾರರಲ್ಲಿ ನೆಲಸಿದೆ. ಅದನ್ನು ಸರಸವಾಗಿ ಕಲಾಕೃತಿಯಲ್ಲಿಳಿಸಲು ಈ ಮೂರು ಗುಣಗಳು ಸದಾ ಸಿದ್ಧವಾಗಿರುತ್ತವೆ.

(೨)

ಹಾಗಾದರೆ ಈ ನಾಲ್ಕು ದೃಶ್ಯಗಳಲ್ಲಿಯ ದರ್ಶನವಾವುದು? **ಸುರಾಸುರ ಯುದ್ಧ**ದಲ್ಲಿ ಆದಿಶೇಷನ ಮಾತಿನಲ್ಲಿಯೇ ಇದು ಸ್ಪಷ್ಟವಾಗಿದೆ. "ಸೃಷ್ಟಿ ಸ್ಥಿತಿ-ಸಂಹಾರಗಳ ಶಕ್ತಿ ಈಗ ಮಾನವನಲ್ಲಿಯೆ ಇದೆ. ನಿಮ್ಮ ಆಟ ನಡೆಯದು." ಎಂದು ಶೇಷನು ದೇವತೆಗಳಿಗೆ ಹೇಳುತ್ತಾನೆ. ದೃಶ್ಯದ ಕೊನೆಗೂ ಶೇಷನ ಮಾತುಗಳು ಬೇಕಾಗಿದ್ದವು. ಆದರೆ ಅವನ ಬದಲು ಮರ್ತ್ಯನೇ ಹೇಳುತ್ತಾನೆ: "ನಡುವೆ ನಿಂತಿದೆ ಸುರ-ದೇವತೆಗಳನ್ನು ಗೆದ್ದ ಅಹಂಕಾರದಿಂದ ಸೆಟೆದು ನಿಂತಿದೆ! ಆದರೂ ಇದು ಮಾನವನ ಕೈಗೆ ಆಯುಧ ಮಾತ್ರ." ಈ ರೀತಿಯಾಗಿ ಮಾನವನೇ ತನ್ನ ಸೋಕ್ಷ-ಮೋಕ್ಷಗಳನ್ನು ಕಂಡುಕೊಳ್ಳಬೇಕೆಂದೂ- ಆ ಶಕ್ತಿಯು ಮಾನವನಿಗಿದೆಯೆಂದೂ- ಯೋಗ್ಯ ವ್ಯಷ್ಟಿ-ಸಮಷ್ಟಿಗಳ ಪ್ರಾದುರ್ಭಾವವೇ ನಿಜ ಸೌಖ್ಯವೆಂದೂ ನಾಟಕಕಾರರು ತಿಳಿಸ ಬಯಸುತ್ತಾರೆ. ಇದನ್ನುಳಿದ ಧರ್ಮವೆಲ್ಲ ನಮಗೆ ಸಂಬಂಧವಿಲ್ಲವೆಂದು ಅವರು ಸಾರುತ್ತಾರೆ.

ಇದನ್ನು ನಿರೂಪಿಸಲು ವಿಡಂಬನೆಯು ಸಮಾವೇಶವಾಗಿದೆ. ಕಾಂಗ್ರೆಸ್ಸಿನ ಆಡಳಿತದಲ್ಲಿ ಸುರುವಾದ ಸುರಾನಿರೋಧಕ ಚಳವಳಿಯನ್ನು ಇಲ್ಲಿ ಬರಿ ಬಣ್ಣ ಕೊಡುವದಕ್ಕೆಂದು ಮಾತ್ರ ಜಾಗಿರದಾರರು ಉಪಯೋಗಿಸಿದ್ದಾರೆ. ಸಂಸ್ಕೃತಜ್ಞರಾದ ಅವರೇ ದೇವತೆಗಳ ಚೇಷ್ಟೆಗೆ ಟೊಂಕ ಕಟ್ಟಿದ್ದರಿಂದ ದೃಶ್ಯವೆಲ್ಲ ವಿನೋದಮಯವಾಗಿದೆ. ಅದಿತೀಸನ ನಿಮಿತ್ತವಾಗಿ ಅಂತ್ಯಬ್ರಹ್ಮನ ವರೆಗೂ ಹೊಯ್ದಾಡುವ ದೃಶ್ಯವನ್ನು ಕಲ್ಪಿಸಿದಾಗ ಸ್ವರ್ಗಲೋಕದ ಕಲ್ಪನೆಯು ಎಷ್ಟೊಂದು ಪೊಳ್ಳಾಗಿದೆಯೆಂದು ಅವರು ತೋರಿಸುತ್ತಾರೆ. ಪ್ರತಿಯೊಬ್ಬ ದೇವತೆಯ ಮಾತಿನಲ್ಲಿ ಔಚಿತ್ಯವು ತುಂಬಿಕೊಂಡಿದೆ. "ನಾನು ಹಾಲಾಹಲ ಒಂದನ್ನೇ ದಕ್ಕಿಸಿದ್ದು; ಮಾನವರು ಎಷ್ಟೋ ಹಾಲಾಹಲಗಳನ್ನು ದಕ್ಕಿಸಿಕೊಂಡಿದ್ದಾರೆ!" ಎಂದು ಶಿವನು ಹೇಳುತ್ತಾನೆ. "ಸರ್ವಭಕ್ಷಕನಾದ ನೀನು ಸ್ವಂತದ ಹಲ್ಲನ್ನು ತಿನ್ನುತ್ತ ಕುಳಿತಿರುವೆಯಾ?" ಎಂದು ಕಂಠದ ದಾಹವನ್ನು ತಡೆಯದ ಅಗ್ನಿಗೆ ವರುಣನು ಕೇಳುತ್ತಾನೆ. "ಸುರಲೋಕವನ್ನು ಸಂಹರಿಸಿ ಮಾನವರಾಗಿ ಅವತರಿಸಿರಿ" ಎಂದು ಒಬ್ಬ ಋಷಿಯು ಅವರಿಗೆ ಹೇಳಿ ಹೋಗುತ್ತಾನೆ. ಕೊನೆಗೆ ವಿಜ್ಞಾನದ ಮುಂದೆ ದೇವತೆಗಳ ಆಟವು ನಡೆಯದೆಂದು ಹೇಳಿ ಮರ್ತ್ಯನು ಅವರದೊಂದು ಸರ್ಕಸ್ಸು ಇಲ್ಲವೆ ಆಟವನ್ನು ಹೂಡುತ್ತಾನೆ. ಅಂತೂ ಈ ಯುಗದಲ್ಲಿ ದೇವತೆಗಳೆಂದರೆ ಸರ್ಕಸ್ಸಿಗೇ ಸರಿಯೆಂಬ ಮಾತು ಇಲ್ಲಿ ಧ್ವನಿತವಾಗುತ್ತದೆ.

ದೇವತೆಗಳಿರಲಿ ಇಲ್ಲದಿರಲಿ,– ಆ ವಿಷಯವನ್ನು ಜಾಗಿರದಾರರು ಚರ್ಚಿಸ ಬಯಸುವದಿಲ್ಲ. ಈ ಜಗತ್ತನ್ನು ಅಲಕ್ಷಿಸಿ ಬೇರೊಂದು ಜಗತ್ತನ್ನೇ ಬೆಳಗಿಸುವ ವಿಚಾರಕ್ರಮವು ಅವರಿಗೆ ಬೇಡಾದುದು. ಇಂಥ ವಿಚಾರಕ್ರಮವು ಬೆಳೆಯುವದಕ್ಕಿಂತ ಈ ದೇವರುಗಳೇ ಹೋಗುವದು ಲೇಸೆಂದು ಅವರು ಅಭಿಪ್ರಾಯಪಡುತ್ತಾರೆ. ಆ ಅಭಿಪ್ರಾಯವನ್ನೇ ಇಲ್ಲಿ ಚಿತ್ರಿಸಿ ತೋರಿಸುತ್ತಾರೆ.

ಇನ್ನು ಕಾವ್ಯಗುಣ ಇಲ್ಲವೆ ಚಿತ್ರಶಕ್ತಿಯ ವಿಷಯವನ್ನು ನೋಡುವಾ. ಕೇವಲ ಶಬ್ದಯೋಜನೆಯಲ್ಲಿಯೂ ಇದು ವ್ಯಕ್ತವಾಗುತ್ತದೆ. "ಹಾಂ, ಹಾಂ, ಅವತಾರದ ಘಟೀ, ಚಕ್ರಸಾಟೀ" ಎಂದು ಶೇಷನು ವಿಷ್ಣುವನು

ಕರೆಯುವಾಗ ಇಲ್ಲವೆ " ನಿನ್ನ ಸಂಗ್ರಹ ನನ್ನ ಸಿಪಾಯರಿಗೆ ಒಪ್ಪಿಸು....... ನಾಳೆಯಿಂದ ನಾಳೆಗೆ ಒಪ್ಪಿಸು" ಎಂದು ಮರ್ತ್ಯನು ಇಂದ್ರನಿಗೆ ಹೇಳುವಾಗ ಈ ಪ್ರಾಸಪ್ರಿಯತೆಯು ಕಂಡು ಬರುತ್ತದೆ. ಇದು ಅವಾಸ್ತವಿಕವಾಗಿದೆ. ಆದರೆ ಜಾಗೀರದಾರರ ಸಾಮಾಜಿಕ ದೃಶ್ಯಗಳಲ್ಲಿಯ ವ್ಯಕ್ತಿಗಳು ಸಹ ಅನೇಕ ಸಲ ಹೀಗೆಯೇ ಮಾತನಾಡುತ್ತಾರೆ. ಇವರು ನಾಟ್ಯಸೃಷ್ಟಿಯ ವೈಶಿಷ್ಟ್ಯಗಳಲ್ಲಿ ಇದೊಂದು. ಇದೇ ಕಾವ್ಯಗುಣವು ಅಲ್ಲಲ್ಲಿ ಬರುವ ಭಾವಗಳಲ್ಲಿಯೂ ಕಾಣುತ್ತದೆ. " ಅಂದು ನನ್ನನ್ನು ಕಡಗೋಲಿಗೆ ಕಟ್ಟಿ ತಿರುಗಿಸಿದುದಕ್ಕೆ ಇಂದಿಗೂ ನನ್ನ ಮೈ ತಿರುಗುತ್ತಿದ್ದು, ಅದಕ್ಕಾಗಿ ನನ್ನ ಬೆನ್ನ ಮೇಲಿನ ಪೃಥ್ವಿ ಕೂಡ ತಿರುಗುತ್ತಲಿದೆ! ನೋಡಿದಿರಾ?" ಎಂದು ಶೇಷನು ದೇವತೆಗಳನ್ನು ಕೇಳುತ್ತಾನೆ. ಸನ್ನಿವೇಶದಲ್ಲಿಯೂ ಅಷ್ಟೆ. 'ಗುರಿ' ಎಂಬ ಸದ್ದು ಪ್ರಾರಂಭವಾಗಿ ಮಾಯವಾಗುವ ಮರ್ತ್ಯ, ಸುರಾಪಾನವಿಲ್ಲದೆ ಬುದ್ಧಿಭ್ರಾಂತರಾಗಿರುವ ಸುರರ ಚಿತ್ರ, ಸೋಮರಸವನ್ನು ಕೈಯಿಂದ ಪಾತ್ರೆಯಲ್ಲಿ ಸುರಿ ಹಾಕಿದ ಋಷಿಯು ತಮ್ಮನ್ನು **ಕೈಯ್ಯಿಂದ** ಮುಟ್ಟಿ ಕ್ಷಮಿಸಬೇಕೆಂಬ ದೇವತೆಗಳ ಆಗ್ರಹ,- ಇವೆಲ್ಲ ನಮ್ಮನ್ನು ತಲೆದೂಗಿಸುತ್ತವೆ.

(೩)

ಉಳಿದ ಮೂರು ದೃಶ್ಯಗಳಿಗಿಂತ ಸುರಾಸುರ ಯುದ್ಧದಲ್ಲಿ ವಿಡಂಬನೆಗೂ ಚಿತ್ರಶಕ್ತಿಗೂ ಆಸ್ಪದ ಹೆಚ್ಚು ಸಿಕ್ಕಿದೆ. ಏಕೆಂದರೆ ಜೀವನದ ವಾಸ್ತವಿಕ ಚಿತ್ರವು ಇಲ್ಲಿ ವ್ಯಂಗವಾಗಿ ಬರಲು ಸಾಧ್ಯವಿದೆಯೇ ಹೊರತು ನೇರವಾಗಿ ಬರುವಂತಿಲ್ಲ. ಆದರೆ ಉಳಿದ ಮೂರರಲ್ಲಿ ಕಲಾಪೂರ್ಣ ವಾಸ್ತವಿಕತೆಯೂ ಬಂದು ಕೂಡಿ 'ದರ್ಶನ'ದ ನಿರೂಪಣೆಯು ಸಮತೂಕವನ್ನು ಕಾಯುತ್ತದೆ. **ಶರ-ಪಂಜರ**ದಲ್ಲಿಯು ಮುದುಕನು ಇದೇ ಜಗತ್ತಿನಲ್ಲಿಯು ಮುದುಕ. ಅವನು 'ಭೀಷ್ಮ' ನಾಗುವುದು ನಾಟಕಕಾರರ ವಿಚಾರ ಚಮತ್ಕೃತಿಯಿಂದ ಮಾತ್ರ. ಚಿತ್ರಶಕ್ತಿಯು ಇಲ್ಲಿ (reverie) ಇಲ್ಲವೆ ಒಂದು ಹಳವಂಡದ ರೂಪವನ್ನು ತಳೆದಿದೆ. ದೃಶ್ಯದಲ್ಲೆಲ್ಲ ಪ್ರಾಸಪ್ರಿಯತೆಯು ಕೋಡಿವರಿದಿದೆ. 'ಎಲ್ಲಿ ನಾನು ಹೋಗಲಿ? ಮೀಟಿಂಗಿಗೊ-ಆಫೀಸಿಗೊ?' ಎಂಬ ಪುನರಾವೃತ್ತಿಯು ಹಿನ್ನೆಳಲಿನಲ್ಲಿ ಬೇರೆ ಬೇರೆ ಛಾಯಾ ಚಿತ್ರಗಳು

ಹಾಯ್ದು ಆ ಮುದುಕನ ಜೀವನದಲ್ಲಿ ಆಗಿಹೋದ ನಾಟಕವನ್ನು ಬಯಲಿಗೆಳೆಯುತ್ತವೆ (ಹೀಗೆ ಅಲ್ಲಲ್ಲಿ ಕಾಣಿಸಿಕೊಳ್ಳುವ ನಾಟಕದಲ್ಲಿಯೇ ವಿಡಂಬನೆಯು ಅಡಕವಾಗಿದೆ.) ಅಲ್ಲಲ್ಲಿ ಬರುವ ಸಂಭಾಷಣೆಯ ಕೌಶಲ್ಯದಲ್ಲಿಯೂ ಮಾತಿನ ಚಮತ್ಕೃತಿಯಲ್ಲಿಯೂ ಚಿತ್ರಶಕ್ತಿಯು ವಿಡಂಬನೆಯನ್ನೂ ಮೂಲ ದರ್ಶನವನ್ನೂ ಮನದಟ್ಟಾಗಿಸುತ್ತದೆ. "ಆ...... .ಆಫೀಸಿನ ಗಂಟೆ ನನ್ನ ಎದೆಯೊಳಗೆ ಬಾರಿಸಿದ ಹಾಗಾಯ್ತು;" "ಇಹಲೋಕದಲ್ಲಿ ನನಗೆ No Vacancy ಎಂದು ಹೇಳಿದ್ದಿಯಲ್ಲವೆ? ... .... ಈಗ ಪರಲೋಕದಲ್ಲಿ ನಿನಗೆ No Vacancy .......;" "ಸತ್ತ ನನ್ನ ಫೋಟೋವನ್ನು ಹಾಕಿಸಿಕೊಂಡು ನನಗೆ ಪುನರ್ಜನ್ಮವನ್ನು ಕೊಟ್ಟ ಪರಬ್ರಹ್ಮ ನೀನು;" ಇವೇ ಮೊದಲಾದ ವಾಕ್ಯಗಳು ಇದಕ್ಕೆ ಉದಾಹರಣೆಯಾಗಿವೆ. ಬಾಳುವೆ-ಮರಣಗಳ ನಡುವೆ, ಮೀಟಿಂಗ್-ಆಫೀಸಿನ ನಡುವೆ, ಸ್ಮರಣ-ವಿಸ್ಮರಣ ನಡುವೆ ಹೊಯ್ದಾಡುತ್ತಿರುವ ಮುದುಕನೇ ಭೀಷ್ಮ,—'ಪಿಂಚಣಿ' ಹೊಂದಿದ ಭೀಷ್ಮ. ಮುದುಕನ ಮನಸ್ಸಿನ ಚಿತ್ರದಲ್ಲಿ ಕಲಾಪೂರ್ಣ ವಾಸ್ತವಿಕತೆಯಿದೆ. ಎರವನೆಯುವರ ಕುತ್ತಿಗೆ ಕೊಯ್ದು ತನ್ನ ಮಾಂಸವನ್ನು ಬೆಳೆಸಿಕೊಂಡ ಮಾನವನಿಗೆ 'ಶರ ಪಂಜರ' ಮನಸ್ಸು ಕಟ್ಟಿಟ್ಟಿದೆಯೆಂಬುದೇ ಇಲ್ಲಿಯ ಮೂಲ 'ದರ್ಶನ' ವಾಗಿದೆ. ವಾಸ್ತವಿಕತೆ-ವಿಡಂಬನೆ-ಚಿತ್ರಶಕ್ತಿಗಳು ಇವನ್ನು ಅಚ್ಚಳಿಯದೆ ಮೂಡಿಸಿವೆ.

'**ಉತ್ತರ-ರಂಗ**' ವು ಕಲೆಯ ದೃಷ್ಟಿಯಿಂದ ಇನ್ನೂ ತುಂಬಿಕೊಂಡು ಬಂದಿದೆ. ನಾಟಕಕಾರ, ಮಾಲಕ, ನಟ, ನಗೆಗಾರ,—ಇವರೆಲ್ಲರ ನಡುವೆ ಒಂದು ನಾಟಕದ ಪ್ರಯೋಗವನ್ನು ಕುರಿತು ನಡೆಯುವ ಸಂಭಾಷಣೆಯಲ್ಲಿ ನಾಟಕ-ಸಿನೇಮಾಗಳ ಸಂಬಂಧ, ನಾಟಕದಲ್ಲಿಯ ಕಲೆ ಹಾಗು ನೀತಿಯ ಸಮಸ್ಯೆ, ನಟರ ನೀತಿವಿಚಾರ, ಇವೇ ಮೊದಲಾದ ಪ್ರಶ್ನೆಗಳ ತೊಡಕನ್ನು ನಾಟಕಕಾರರು ಸುಂದರವಾಗಿ ಚಿತ್ರಿಸಿದ್ದಾರೆ. ದೃಶ್ಯದ ಕೊನೆಯು ಕಲಾಪೂರ್ಣವಾಗಿದೆ. ದುಡ್ಡಿನ ಬೆನ್ನುಹತ್ತಿದ ಮಾಲಕ-ನಟ-ವಿದೂಷಕರು ಚಲಚ್ಚಿತ್ರದ ಜಗತ್ತಿನಲ್ಲಿ ಕಾಲಿಟ್ಟರೆ ನಾಟಕದ ರಚನೆಯಲ್ಲ ಮಾತ್ರ ಇನ್ನು ಮೇಲೆ ಕಲಾಸಿದ್ಧಿಯು ಸಾಧ್ಯವೆಂದು ಚಲಚ್ಚಿತ್ರದ ಕಡೆಗೆ ತಿರುಗಿದ ನಾಟಕಕಾರನು ಮತ್ತೆ ನಾಟಕಗಳನ್ನೇ ಬರೆಯಲೆಸಗುತ್ತಾನೆ!

ಲಲಿತ ಕಲೆ ಹಾಗು ವ್ಯವಹಾರದ ಬ್ರಹ್ಮಗಂಟೇ ಇಲ್ಲಿಯ ಮೂಲ ವಸ್ತು ವಾಗಿದೆ. ಅದನ್ನು ಅರಳಿಸುವವರಲ್ಲಿ ಮೇಲೆ ಹೇಳಿದಂತೆಯೇ ವಿಡಂಬನೆ-ಚಿತ್ರಶಕ್ತಿ-ವಾಸ್ತವಿಕತೆಗಳು ಬೆರೆತುಕೊಂಡಿವೆ.

**ಅನುಭವದ ಅದ್ವೈತ** ದಲ್ಲಿ ಕಲೆಯ ಓರಣವೂ ನಿಕಟತೆಯೂ ಉಳಿದ ಮೂರು ದೃಶ್ಯಗಳಲ್ಲಿಗಿಂತ ಹೆಚ್ಚಾಗಿ ಸಾಧಿಸಿವೆ. ಮನೆಮನೆಯಲ್ಲಿಯೂ ಇದೇ ಹಾಡು; ಸುಖವೆಂಬುದು ದುಃಸಾಧ್ಯವಾಗಿದೆ; ವಿಷಮ ಪರಿಸ್ಥಿತಿ ಹಾಗು ಆ ಪರಿಸ್ಥಿತಿಯಿಂದ ಬೇಸತ್ತು ಹೋದ ಎರಡು ಮನಗಳ ತಾಕಲಾಟ:— ಇದೇ ಎಲ್ಲರೂ ಸುರಿದುಕೊಳ್ಳುವ ಸಂಸಾರಸುಖವೆಂಬ ಮಾತನ್ನು ಆಳವಾದ ಕರುಣಹಾಸ್ಯದಿಂದ ನಾಟಕಕಾರರು ಇಲ್ಲಿ ಚಿತ್ರಿಸಿದ್ದಾರೆ. ಮನೆಗೆಲಸವು ಹೆಂಡತಿಗೊಂದು ' ನೆವ '; ಆಫೀಸು ' ಗಂಡ 'ನಿಗೆ. ಅನೇಕ ' ನೆವ 'ಗಳ ಬುಡದಲ್ಲಿ ಸಿಕ್ಕು ಪ್ರೀತಿಯು ಒದ್ದಾಡುತ್ತಿರುತ್ತದೆ. ಈ ' ನೆವ 'ಗಳನ್ನು ಬಿಚ್ಚಿ ತೋರಿಸುವದಕ್ಕೆ ಮಾತ್ರ ತೀರ ಹಗುರಾಗಿ ವಿಡಂಬನೆಯು ಇಲ್ಲಿ ಬಂದಿದೆ. ಚಿತ್ರ ಶಕ್ತಿಯು ರಂಗಭೂಮಿಯ ಮೇಲೆ ಒಂದೇ ವೇಳೆಗೆ ಎರಡು ಸಂಸಾರ ಚಿತ್ರಗಳನ್ನು ತರುವದರಲ್ಲಿಯೂ ಒಂದು ' ಸಂಸಾರ 'ವು ಇನ್ನೊಂದು ' ಸಂಸಾರ 'ಕ್ಕೆ ಉತ್ತರ ಕೊಟ್ಟಂತೆ ಭಾಸವಾಗುವ ಹಾಗೆ ಮಾತುಗಳನ್ನು ಹೆಣೆಯುವದರಲ್ಲಿಯೂ ಸುಳಿದಿದೆ; ದೃಶ್ಯದ ಪ್ರಾರಂಭದಿಂದ ಕೊನೆಯ ವರೆಗೆ ಕೋಟು-ಕನ್ನಡಕ-ರುಮಾಲುಗಳನ್ನು ಹುಡುಕಾಡುವ ' ಈಕೆಯ ಗಂಡ' ನ ಗೊಂದಲದಲ್ಲಿಯೂ ಮೂಡಿದೆ.

ಆದರೆ ಈ ದೃಶ್ಯದ ಮುಖ್ಯ ಗುಣವೆಂದರೆ,— ಚಿತ್ರ ಶಕ್ತಿ ವಾಸ್ತವಿಕತೆ-ವಿಡಂಬನೆಗಳು ವಿರಳವಾಗಿ ಬೆರತುಕೊಂಡಿದ್ದು. ಈ ಮೂರು ಗುಣಗಳೂ ಬ್ರಹ್ಮ-ವಿಷ್ಣು-ರುದ್ರರಂತೆ ಮೂರು ಮುಖಗಳಾಗಿದ್ದರೆ ಮೂಲ ದರ್ಶನವು ದತ್ತಾತ್ರಯನಂತೆ ತ್ರಿಮುಖಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಎಲ್ಲವೂ ಒಂದೇ ದೇಹ,-ಒಂದೇ ಪುರುಷನಾಗಿ ಬಿಟ್ಟಿದೆ. ಇದು ಹೆಚ್ಚಿನ ರಸಸಿದ್ಧಿ. **ಸುರಾಸುರ ಯುದ್ಧ**ದಲ್ಲಿ ಈ ಗುಣಗಳ ಸಾಮಿಪ್ಯವಿದೆ. ಈ ದೃಶ್ಯದಲ್ಲಿ ಅವುಗಳ ' ಅದ್ವೈತ 'ವಿದೆ.

ಜಾಗಿರದಾರರ ಕೃತಿಗಳ ಕ್ರಾಂತಿಮಯತೆಯು ಒಮ್ಮೊಮ್ಮೆ ಅವರ ಕಲಾಸಿದ್ಧಿಯನ್ನು ಮರೆಸುವುದುಂಟು. ಆದಕಾರಣ ಮೇಲಿನ ಕಲವು

ಮಾತುಗಳಲ್ಲಿ ಅವರ ಕಲೆಯ ನಿಲುವುಗೆಲುವುಗಳನ್ನು ನಾನು ಸೂಚಿಸಿದ್ದೇನೆ. ಕಾಗದವಿಲ್ಲದ ಈ ದಿವಸಗಳಲ್ಲಿಯೂ ಈ ದೃಶ್ಯಗಳನ್ನು ಪ್ರಸಿದ್ಧಿಸಲು ಪ್ರಯತ್ನಿಸಿದ ಪ್ರಕಾಶಕರು— ಶ್ರೀಮನ್ ಗೋವಿಂದರಾಯರು ನಿಜವಾಗಿ ಅಭಿನಂದನೆಗೆ ಪಾತ್ರರಾಗಿದ್ದಾರೆ. ಸ್ವತಃ ಮಾನ್ಯ ಸಾಹಿತಿಗಳೂ ಭಾಷಾ ಶಾಸ್ತ್ರ ವಿಶಾರದರೂ ಆದ ಶ್ರೀಮಾನ್ ಜೋಶಿ ಶಂಕರರಾಯರ ನೇತೃತ್ವದಲ್ಲಿ ಈ ಗ್ರಂಥ ಮಾಲೆಯು ಹೀಗೆಯೇ ಅರಳುತ್ತ ಹೋಗುವದರಲ್ಲಿ ಸಂಶಯವಿಲ್ಲ.

ವಿಲಿಂಗ್ಡನ್ ಕಾಲೇಜು
೨೦—೯—೧೯೪೩.

ವಿ. ಕೃ. ಗೋಕಾಕ

---

# ನನ್ನ ನಾಂದೀ



ಹಲವಾರು ನನ್ನ ಏಕಾಂಕಗಳಲ್ಲಿ ನಾಲ್ಕು ಇಲ್ಲಿ ಪ್ರಕಟನೆಯನ್ನು ಪಡೆಯುತ್ತಲಿವೆ. ಸಾಮಾನ್ಯವಾಗಿ ಅಲ್ಲಲ್ಲಿ ಮಾಸಿಕಗಳಲ್ಲಿ ಈ ಮೊದಲೇ ಪ್ರಕಟವಾದವುಗಳೆಲ್ಲ ಅನೇಕಸಲ, ಅನೇಕ ಕಡೆ ರಂಗಭೂಮಿಯನ್ನು ಕಂಡಿವೆ. ವರ್ಷವರ್ಷಕ್ಕೂ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳೂ ನಾಟ್ಯವಿಲಾಸಿಗಳೂ ಏಕಾಂಕಗಳನ್ನು ಕೋರುತ್ತಿರುವಾಗಲೂ ಇದುವರೆಗೆ ಅವು ಪ್ರಕಟವಾಗದ್ದಕ್ಕೆ ನನ್ನ ಆಲಸ್ಯವೇ ಕಾರಣ; ಇಂದು ಒಂದೊಂದಾಗಿ ಪುಸ್ತಕರೂಪದಲ್ಲಿ ಹೊರಬೀಳುತ್ತಿರುವುದಕ್ಕೆ ನನ್ನ ಗೆಳೆಯರಾದ ಜೋಶಿ ಶಂಕರರಾಯರೇ ಕಾರಣ.

ನನ್ನ ಏಕಾಂಕಗಳಿಗೆ ಅನೇಕ ಬೇರೆ ಬೇರೆ ಅನುಭವಗಳೂ ಸಂಗತಿಗಳೂ ಕಾರಣವಾಗಿವೆ. ಮುಖ್ಯವಾಗಿ ಯಾವುದೆ ಕಾರಣದಿಂದ ನನಗೆ ದುಃಖ ಇಲ್ಲವೆ ಅಸಮಾಧಾನವಾಗಿ ಅದೇ ಕಾರಣವನ್ನು ಬೇರೊಂದು ದೃಷ್ಟಿಯಿಂದಲೂ ನೋಡಬಾರದೇಕೆ— ಎಂದು ತೊಡಗಿದಾಗ ನನ್ನ ಏಕಾಂಕ ಹುಟ್ಟುವುದು. ಇದಕಾಗಿಯೆ ಸಂತಾಪದ ಹಾಸಿಗೆಯ ಮೇಲೆ ನಗೆಯ ಹೊದಿಕೆಯನ್ನು ಹಾಕುತ್ತಿರಬಹುದು ನನ್ನ ನಾಟ್ಯಬುದ್ಧಿ. ಆ ವಿಷಯ ನಾನು ಹೆಚ್ಚಿಗೆ ಬರೆಯಲಾರೆ, ಬರೆಯುವುದೂ ಅನುಚಿತ.

ಈ ನಾಲ್ಕು ಏಕಾಂಕಗಳಲ್ಲಿ ಇದ್ದವರು (ಪ್ರಪಂಚಪ್ರವಾಹ), ಸತ್ತವರು (ಶರಪಂಜರ), ಸಾಯಬೇಕೆಂದವರು (ಉತ್ತರರಂಗ) ಮತ್ತು ಸ್ವರ್ಗದವರು (ಸುರಾಸುರ ಯುದ್ಧ) ಹೀಗೆ ಜೀವನದ ಮೆಟ್ಟಿಲುಗಳ ದೃಶ್ಯಗಳಿರುವುದರಿಂದ ಈ ಸಂಗ್ರಹಕ್ಕೆ 'ಜೀವನ-ರಂಗ' ಎಂಬ ಹೆಸರನ್ನು ಕೊಟ್ಟಿದ್ದೇನೆ.

ಶ್ರೀರಂಗ



## ಪಾತ್ರವಿವರ

ಮುದುಕ

ತರುಣಿ

ಯುವಕ

ಹೆಂಗಸು

ಗೃಹಸ್ಥ

ವಿ. ಸೂ:— ಮುದುಕನೊಬ್ಬನೆ ಜೀವದಿಂದಿದ್ದಾನೆ. ಮಿಕ್ಕವರೆಲ್ಲ ಭೂತಗಳು.

# ರಂಗಸೂಚನೆ



[ ಮುಂಜಾವಿನ ೧೦ ಗಂಟೆಯು ಸಮಯ. ಒಬ್ಬ ಮುದುಕ ಪೆನ್‌ಶನರರ ಮನೆಯಲ್ಲಿಯ ಒಂದು ಕೋಣೆ. ರಂಗಭೂಮಿಯ ಮಧ್ಯದಲ್ಲಿ ಒಂದು ಕುರ್ಚಿ. ಆ ಕುರ್ಚಿಯ ( ಪ್ರೇಕ್ಷಕರ ಬಲ ) ಬದಿಗೆ ಒಂದು ಮೇಜು; ಆ ಮೇಜಿನಾಚೆಗೆ, ಗೋಡೆಯ ಸಮೀಪ, ಒಂದು ಗ್ರಂಥಫಲಕ (book-stand); ಮೇಜಿನ ಮೇಲೆ ಕಾಣುವ ಗಡಿಯಾರದ ‘ ಟಿಕ್, ಟಿಕ್ ’ ಸದ್ದು ಒಂದೇ ಸವನೆ ಕೇಳಬರುತ್ತಿದೆ; ಅಷ್ಟೊಂದು ಶಾಂತತೆ ಹರಡಿದೆ ಕೋಣೆಯಲ್ಲಿ. ಕಿಟಿಕಿಗಳಿಲ್ಲ-ಬಾಗಿಲು ಇರಲೇಬೇಕು, ಆದರೆ ಕಾಣುವಂತಿಲ್ಲ; ಅಷ್ಟೊಂದು ಕತ್ತಲೆ—ನಡೆಯುವಾಗ ಎಡವಿ ಬೀಳುವಷ್ಟು — ಗೋಡೆಗಳಿಗೂ ಮೂಲೆ ಮೂಲೆಗಳಿಗೂ ಹಬ್ಬಿದೆ. ಮಾಳಿಗೆಯಿಂದ ಮಂದವಾಗಿ ಸೂಸುವ ಪ್ರಕಾಶವು ಕುರ್ಚಿಯ ಮೇಲೂ ಮೇಜಿನ ಕೊನೆಯ ಮೇಲೂ ಬಿದ್ದಿದೆ. ಈ ಪ್ರಕಾಶದಲ್ಲಿ ಕುರ್ಚಿಯ ಮೇಲೆ ಮುದುಕನು ಕಾಣುವನು. ಆವನ ವಯಸ್ಸು ಎಂಭತ್ತರಷ್ಟಿರಬಹುದು. ತಲೆಗೆ ರುಮಾಲು, ಮೈಮೇಲೆ ಕೋಟು—ಉಪ್ಪರಣೆ, ಕೈಯಲ್ಲಿ ಒಂದು ಬಡಿಗೆ, ಈ ಅವಸ್ಥೆಯಲ್ಲೂ ಮುದುಕನಿಗೆ ಕುಳಿತಲ್ಲಿಯೆ ನಿದ್ರೆ ಹತ್ತಿದೆ. ಅರೆತೆರೆದ ಬಾಯಿ, ಕಳೆಯಿಲ್ಲದ ಮುಖ, ಎಲುಬುಗೆಟ್ಟ ದೇಹ—ಮುದುಕನು ಜೀವದಿಂದಿರಬಹುದೆ ಎಂದು ಸಂಶಯ ತರುವಂತಿದೆ. ಇಷ್ಟರಲ್ಲಿ ಕೈಯೊಳಗಿನ ಬಡಿಗೆ ಜಾರಿ ನೆಲಕ್ಕೆ ಬೀಳುವುದು; ಆ ಸದ್ದಿಗೆ ಮುದುಕನು ತಟ್ಟನೆ ಕಣ್ದೆರೆಯುವನು. ಗಾಬರಿಯಿಂದ ಅತ್ತಿತ್ತ ನೋಡುವನು, ಕಣ್ಣು ಸರಿಯಾಗಿ ಕಾಣುವುದೆ ಇಲ್ಲ; ಏಳಬೇಕೆಂದರೆ ಕಾಲು ಎತ್ತದಂತಾಗಿವೆ. ಕೊನೆಗೆ ರುಮಾಲನ್ನು ಸರಿಯಾಗಿರಿಸಿಕೊಂಡು ಉಪ್ಪರಣೆಯನ್ನು ಸಾವರಿಸುತ್ತ —— ]

ಮುದುಕ:— (ಕುಳಿತಲ್ಲಿಯೆ ಕಳವಳದಿಂದ) ಅಯ್ಯೋ!.... ಏ ಹುಸೇನಿ, ಇಬ್ರಾಹಿಮ್, ಪ್ಯಾನ್, ಛೋಕ್ರಾ? ಯಾರಿದ್ದೀರಿ ಅಲ್ಲಿ ಹೊರಗೆ? (ನರಳುತ್ತ) ಏನು ಮಾಡಲಿ? ಆಫೀಸಿಗೆ ಹೋಗಬೇಕಲ್ಲ? ಹತ್ತು ಗಂಟೆ ಆಯಿತೊ ಏನೊ!....ಆ....ಆಫೀಸಿನ ಗಂಟೆ ನನ್ನ ಎದೆಯೊಳಗೆ ಬಾರಿಸಿದ ಹಾಗಾಯ್ತು!....ಆಫೀಸಿಗೆ ತಡ ಆದರೆ ದೊಡ್ಡ ಸಾಹೇಬರು ಏನಂತಾರೊ ಏನೊ! ನನ್ನ ಸೀನಿಯರ ಸತ್ತು ಹೋದ-ಅವನ ಜಾಗೆಗೆ ಪ್ರಯತ್ನ ಮಾಡುವವ ನಾನು—ತಡ ಆದರೆ— (ಒಮ್ಮೆಲೆ ತಡೆದು ಸಿಟ್ಟಿನಿಂದ) ಏನೆ—ಏನ್ಮಾಡ್ತಾ ಇದ್ದೀಯೆ ನೀನು? ಹೇಳ್ಬಾರದೆ ಹುಸೇನಿಗೆ ಗಾಡಿತಕ್ಕೊಂಡು ಬಾ ಅಂತ?..ಬಂದೆಯಾ? ನನ್ನ ಬೂಟ್ಸು ತಕ್ಕೊಂಡು ಬಾ....ಹಾಳಾಯ್ತು ನಿನ್ನ ಮಡಿ! ಒಮ್ಮೆ ನಾನು ಸೀನಿಯರ ಆಫೀಸರ ಆದೆ ಅಂದರೆ ಬೇಕಾದಷ್ಟು ಮಡಿ ಮಾಡುವೆಯಂತೆ....ಅಲ್ಲಿಯ ವರೆಗೆ ಸಾಹೇಬ-ಮಡೆಮ್ಮರ ಶೇಕ್ ಹ್ಯಾಂಡ್ ಮಾಡಬೇಕಲ್ಲ?....ಮುಂದೆ ಬೇಕಾದರೆ ಮಡಿ ಮಾಡಲಿಕ್ಕೆ ಒಬ್ಬ ಸ್ಪೆಶಲ್ ಸರ್ವಂಟನ್ನೆ ಇಟ್ಟುಬಿಡೋಣ!.... (ನಗೆಮೊಗದಿಂದ) ನಿನ್ನೆ ಸಾಹೇಬರು ಏನಂದರು ಅಂತೀಯೆ? 'ನಾನು ಇನ್ನೊಂದೆರಡು ವರ್ಷಕ್ಕೆ ವಿಲಾಯತಿಗೆ ಹೋಗತೀನಿ ರಜೆಯ ಮೇಲೆ—ಅದೊಂದು ತಿಂಗಳಿಗಾಗಿ ನಿನ್ನ ಹೆಸರನ್ನೆ ಕೊಡತೀನಿ ಆಕ್ಟ್ ಮಾಡಲಿಕ್ಕೆ' ಅಂದರು! (ಸೌಮ್ಯವಾಗಿ) ಬೂಟ್ಸು ತಂದೆಯಾ? (ಎರಡೂ ಕಾಲ್ಗಳನ್ನು ಮುಂದೆ ಸರಿಸಲು ಮುಗ್ಗರಿಸುವನು. ಕೈಬಡಿಗೆಯನ್ನು ಗಟ್ಟಿಯಾಗಿ ಹಿಡಿದು ಸಿಟ್ಟಿನಿಂದ) ಬೂಟ್ಸು—ಅಂದೆ! (ತೇಕುತ್ತ ಒಂದು ನಿಮಿಷ ಹಣೆ ಹಿಡಿದುಕೊಂಡು) ಎಲ್ಲಿಯೋ ಹೋಗಬೇಕಾಗಿದೆ ನನಗೆ! ಎಲ್ಲಿ? (ಕಳವಳದಿಂದ) ಅಯ್ಯೋ—ಏನ್ಮಾಡಲಿ? ಎಲ್ಲಿ ಹೋಗಬೇಕಾಗಿದೆ, ಅಂತ ಹೇಳುವವರು ಯಾರೂ ಇಲ್ಲವೆ? (ಕೈ ನಡುಗಿ ಬಡಿಗೆ ಬೀಳುವುದು) (ಒಮ್ಮೆಲೆ) ಹಂ—ಸ್ಮರಣೆಗೆ ಬಂದಿತು. ಡೈರೆಕ್ಟರ್ಸ ಮೀಟಿಂಗು ಇದೆ ಈ ಹೊತ್ತು!....ಅಂತೂ ಸ್ಮರಣೆಗೆ ಬಂದಿತಲ್ಲ!.... ನಾನು ಮುದುಕನಂತೆ! (ಎಂದು ಬಡಿಗೆಯನ್ನು ಎತ್ತಲು ಆಯಾಸದಿಂದ ಬಾಗುವನು. ಬಡಿಗೆ ಕೈಗೆ ದೊರೆತರೂ, ಬಾಗಿದ ಬೆನ್ನು ಬೇಗ ಏಳುವುದಿಲ್ಲ. ಎಡ

ಗೈಯಿಂದ ಮೇಜಿನ ಮೇಲೂ ಬಲಗೈಯಿಂದ ಬದಿಗೆಯ ಮೇಲೂ ಭಾರವನ್ನಿಟ್ಟು ಕೊನೆಗೆ ಆಯಾಸದಿಂದ ಕುಳಿತುಕೊಳ್ಳುವನು. ತೇಕುವುದು ಕಡಿಮೆಯಾದ ಮೇಲೆ) ಬೆನ್ನು ಎತ್ತದಿದ್ದರೂ ಬುದ್ಧಿ ಬತ್ತಿಲ್ಲವಲ್ಲ ಇನ್ನೂ! ಅಂತೇ ನನ್ನನ್ನ ಬಿಟ್ಟರೆ ಯಾರಿಗೂ ಸಾಗೋದೇ ಇಲ್ಲ. ಮಾಡೋದೇನು? ದೇಹದಲ್ಲಿ ಉಸಿರಿರುವ ವರೆಗೆ (ಆಯಾಸದಿಂದ ಏಳುವಾಗ ಉಸಿರು ಸಾಲದೆ) ದೇ-ಹ-ದ-ಹ-ಲ್ಲಿ-- (ತಡೆದು) ಆಫೀಸು--ಅಲ್ಲ-ಡೈರೆಕ್ಟರ್ಸ ಮೀಟಿಂಗ-(ಒಮ್ಮೆಲೆ ಕಳವಳದಿಂದ) ಯಾವ ಡೈರೆಕ್ಟರ್ಸ? (ಸಂತಾಪದಿಂದ) ಥೂ-ಇದರ ಹಾಳಾಗಲಿ! ಬೇಡ ಅಂದರೂ ನೂರು ಕಂಪನಿಗಳ ಡೈರೆಕ್ಟರ ಮಾಡಿದರು ನನ್ನ— (ಅಳುಮೋರೆಯಿಂದ) ಈಗ ಯಾವ ಕಂಪನಿಯ ಡೈರೆಕ್ಟರ್ಸ ಮೀಟಿಂಗು ಅಂತ— (ಒಮ್ಮೆಲೆ ಬೆದರಿದಂತೆ) ಏನು ಆಫೀಸಿಗೊ?.... (ಹಣೆ ಹಿಡಿದು) ರಾಮು! ರಾಮಾ! ನಿಂತ ನಿಂತಲ್ಲಿಯೆ ಜೀವ ಹೋಗಬಾರ್- (ಒಮ್ಮೆಲೆ ಹಲ್ಲಿಲ್ಲದ ಬಾಯಿಯಿಂದ, ಉಸಿರಿಲ್ಲದ ಗಂಟಲಿನಿಂದ ಮುಪ್ಪಿನ ಪೊಳ್ಳುನಗೆ ನಕ್ಕು) ಜೀವ ಅಂದ ಕೂಡಲೆ ನೆನಪಾಯಿತು, ಲೈಫ್ ಇನ್ಶೂರನ್ಸ—ಜೀವ ವಿಮಾ ಕಂಪನಿಯ ಡೈರೆಕ್ಟರ್ಸ್ ಮೀಟಿಂಗು ಈ ಹೊತ್ತು!....(ಒಮ್ಮೆಲೆ ಕುರ್ಚಿಯಲ್ಲಿ ಬಿದ್ದು) ಆದರೆ ನಾನು ಹೋಗೋದು ಹೇಗೆ? (ನರಳುತ್ತ) ಏ-ಬಂದೆಯೇನೆ? ನನಗೆ ಎಲ್ಲಿಯೊ ಹೋಗಬೇಕಾಗಿದೆ, ತಿಳಿಯಿತೇನು? ನಿನಗೂ ಮರೆಯಿತೊ ಏನ್ಮಣ್ಣೊ? ಮುಪ್ಪಿನಲ್ಲಿ ಉಪಯೋಗ ಬೀಳಲಿ ಅಂತ ಚಿಕ್ಕ ಹೆಂಡತೀನ್ನ ಮಾಡಿಕೊಂಡರೆ-....ನನ್ನ ಬೂಟ್ಸು- (ಹಣೆ ಹಿಡಿದು ಕೊಳ್ಳುವನು) ಬಂದೆಯೇನೆ ಬೂಟ್ಸು ತಕ್ಕೊಂಡು?

[ಅವನ ಬಲಬದಿಯ ಮೂಲೆಯಲ್ಲಿ ತರುಣಿಯ ಮೂರ್ತಿಯೊಂದು ಕಾಣುವುದು]

**ತರುಣಿ:**— ಬಂದೀನಿ— ಇಲ್ಲಿಯೆ ನಿಂತುಕೊಂಡೀನಿ.

**ಮುದುಕ:**— (ಸಮಾಧಾನದ ದನಿಯಲ್ಲಿ) ಬಂದೆಯಾ? ಅಲ್ಲೇ, ನನಗೆ ಆಫೀಸಿಗೆ ಹೋಗಬೇಕಾಗಿದೆ, ನೀನು ಎಲ್ಲಿ ಇದ್ದಿ?

**ತರುಣಿ:**— (ಆಶ್ಚರ್ಯದ ದನಿಯಲ್ಲಿ) ಆಫೀಸಿಗೆ? ಇನ್ನೂ ಆಫೀಸಿಗೆ ಹೋಗೋದರೊಳಗೆಯೆ ಇದ್ದೀರಾ ನೀವು?

**ಮುದುಕ:**— (ಹಟಮಾರಿ ಹುಡುಗನಂತೆ) ಹೋಗೋದರೊಳಗೆಯೆ-ಅಂದರೆ? ಏನು ಮಾಡಲಿ ನಾನು? ಹುಸೇನಿ ಇಲ್ಲ, ಇಬ್ರಾಹಿಮ್ ಇಲ್ಲ, ಗಾಡಿ ಇಲ್ಲ, ನೀನು ಇಲ್ಲ————ಎಲ್ಲಿ ಹೋಗಬೇಕನ್ನೋದೂ ಗೊತ್ತಿಲ್ಲ——ನಿನಗಾದರೂ ಗೊತ್ತಿದೆಯೇನು ಅಂದರೆ ನೀನೂ ಇಲ್ಲ!

**ತರುಣಿ:**— (ನಡುವೆಯೆ) ನಾವು ಯಾರೂ ಇಲ್ಲ, ನನಗೆ ಗೊತ್ತಿದೆ; ಅದಕ್ಕೇ-

**ಮುದುಕ:**— (ಚಕಿತನಾಗಿ) ನೀವು ಯಾರೂ ಇಲ್ಲ? ಇಲ್ಲ ಅಂದರೆ ಎಲ್ಲಿ ಹೋಗಿದ್ದಿರಿ ಅಂತ ಕೇಳ್ತೀನಿ.

**ತರುಣಿ:**— (ಕನಿಕರದಿಂದ) ಅಯ್ಯಯ್ಯ! ಬುದ್ಧೀನೇ ಹೋಗಿದೆಯೊ ಏನೊ? ನಾನು ಸತ್ತೀಸಿ ಅಂಬೋದನ್ನ ಮರತಿರೇನು?

**ಮುದುಕ:**— ಸತ್— (ಒಮ್ಮೆಲೆ ಗಾಬರಿಯಿಂದ) ಯಾರು ನೀನು?

**ತರುಣಿ:**— (ನಗೆಯಿಂದ) ಯಾರು ಅಂದರೆ? ನಿಮ್ಮ ಹೆಂಡತಿ.

**ಮುದುಕ:**— (ಆತುರತೆಯಿಂದ) ನನ್ನ ಹೆಂಡತಿ ಇದ್ದಿರಬಹುದು— ಆದರೆ ಯಾವ ಹೆಂಡತಿ? ಅಂದರೆ ಎಷ್ಟನೆಯ ಹೆಂಡತಿ?

**ತರುಣಿ:**— ನನಗೇನು ಗೊತ್ತು ನನ್ನ ಮುಂಚೆ, ನನ್ನ ಮೇಲೆ ನೀವು ಎಷ್ಟು ಮದುವೆ ಮಾಡಿಕೊಂಡಿರಿ ಅಂಬೋದು?

**ಮುದುಕ:**— (ಯೋಚನೆಯಲ್ಲಿ) ಎಷ್ಟು ಮದುವೆ ಅಂದು ಮಾಡೋದೇನು ಎಲ್ಲರೂ ಸತ್ತ ಮೇಲೆ?

**ತರುಣಿ:**— ಅದಕ್ಕೇ ಕೇಳಿದೆ, ಇಷ್ಟುಮಂದಿ ನಿಮ್ಮ ಕಣ್ಮುಂದ ಸತ್ತು ಹೋದರೂ ನೀವು ಮಾತ್ರ ಇನ್ನೂ ಆಫೀಸಿಗೆ ಹೋಗೋದರೊಳಗೆಯೆ ಇದ್ದೀರಾ ಅಂತ.

**ಮುದುಕ:**— (ಇನ್ನೂ ಯೋಚನೆಯಲ್ಲಿಯೆ) ಸತ್ತರು! ಎಲ್ಲರೂ ಸತ್ತು ಹೋದರು! ನೀನು ಸತ್ತಿರುವೆ! ಅಂದರೆ ನಾನು — ನಾನು ಜೀವದಿಂದಿರುವೆ ಅಂದ ಹಾಗಾಯಿತಲ್ಲ!

**ತರುಣಿ:**— ನನಗೇನು ಗೊತ್ತು ನೀವು ಏನಿದ್ದೀರಿ ಅಂತ?

**ಮುದುಕ:**— (ಹಟದಿಂದ) ಇಲ್ಲ - ನಾನು ಜೀವದಿಂದಿರಲೇಬೇಕು! (ನಗೆಯಿಂದ) ಯಾಕೆಂದರೆ ನಾನು ಆಫೀಸಿಗೆ ಹೊರಟು ನಿಂತಿರುವೆ! ಹಹ! (ನಗೆ ತಡೆಯುವೆ ಕೆಮ್ಮು ಬರುವುದು, ವ್ಯಥೆಯಾಗುವುದು)

**ತರುಣಿ:**— (ಕಳಕಳಿಯಿಂದ) ನನ್ನ ಹಾಗೆ ಎಷ್ಟು ಮಂದೀನ್ನ ಗೋಳಿಗೀಡು ಮಾಡಿರುವಿರೊ ಏನೊ-ಮುಪ್ಪಿನಿಂದ ಇಷ್ಟು ಕಷ್ಟ ಬಡಲಿಕ್ಕೆ?

**ಮುದುಕ:**— (ಇಳಿದನಿಯಲ್ಲಿ) ಮುಪ್ಪಿನಿಂದ? ಯಾರಿಗೆ ಬಂದಿದೆ ಮುಪ್ಪು? ಮೊನ್ನೆ ಮೊನ್ನೆ ನನಗೊಂದು ವಿಚಾರಣಾ ಸಮಿತಿ (Enquiry Committee) ಯ ಸದಸ್ಯನಾಗಲಿಕ್ಕೆ ಕೇಳಿಕೊಂಡಿದ್ದರು. ನಾನೂ ಒಪ್ಪಿಕೊಂಡೀನಿ.

**ತರುಣಿ:**— (ತಿಳಿಯದೆ) ಏನು ಸಮಿತಿಯೊ ಏನು ಸಂಸ್ಥೆಯೊ? ಕೆಲಸ ಸಿಕ್ಕಿದ್ದರೆ ನಿಮ್ಮ ಮೊಮ್ಮಕ್ಕಳಿಗೆ ಪೆನ್‌ಶನ್ ಆಗೋ ಕಾಲ!

**ಮುದುಕ:**— (ಉಬ್ಬಿ ಸಂತಸದಿಂದ) ಹಹ! ನೋಡಿದಿಯಿಲ್ಲೊ? ಕೆಲಸ ಸಿಕ್ಕಿದ್ದರೆ — ? — **ರೆ?** ಆದರೆ ನಮ್ಮಂತಹ ಅನುಭವಿಕರು ಇರುವಾಗ ಹುಡುಗರಿಗೆ ಕೆಲಸ ಸಿಕ್ಕೋದು ಹೇಗೆ?

**ತರುಣಿ:**— (ಸಿಟ್ಟಿನಿಂದ) ಹಾಳಾಯಿತು ನಿಮ್ಮ ಅನುಭವ! ನಿಮ್ಮ ಮದುವೆ ಮಾಡಿಕೊಳ್ಳೊ ಅನುಭವದ ಯೋಗ್ಯತಾದಿಂದಲೆ ನನ್ನನ್ನು ಮದಿವೆಯಾದಿರೊ ಏನೋ? ನನಗ ಬಂದ ಸ್ಥಿತೀನೇ ನಿಮ್ಮ ಅನುಭವದ ಎಲ್ಲಾ ಕೆಲಸಕ್ಕೂ ಬಂದರೆ ದೇವರೇ ನೋಡಿಕೋಬೇಕು.

**ಮುದುಕ:**— ಮತ್ತೆ ನೀನು ಜಗಳ ಹೂಡಿದೆಯಾ? ಪ್ರತಿಯೊಂದು ಸಲ ಹೀಗೇ ಮಾಡುವೆ. ಈ ಸಲ ನಿನಗೆ ನಿಶ್ಚಯದಿಂದ ಬಂಗಾರದ ಡಾಬು ಮಾಡಿಸಿಕೊಡತೀನಿ, ಆಯಿತಿಲ್ಲೊ?

**ತರುಣಿ:**— ಸುಟ್ಟಿತು ನಿಮ್ಮ ಡಾಬು! ಜೀವಂತ ಇರುವಾಗ ಬರಿಯ ಮಾತಾಯ್ತು, ಇನ್ನು ಸತ್ತ ಮೇಲೆ ಮಾಡಿಸುವವರು ಇವರು? ಹೀಗೆ ಮುಂದಿಗೆ ಆಶೆ ಹಚ್ಚಿ ಕೆಲಸ ಮಾಡಿಸಿಕೊಳ್ಳೋದೇ ನಿಮ್ಮ ಅನುಭವ ಕಾಣಿಸತದೆ. ನಮ್ಮ ತಂದೆಗೆ ದುಡ್ಡಿನ ಆಶೆ ಹಚ್ಚಿ—

**ಮುದುಕ:**— (ಸಿಟ್ಟಿನ ದನಿಯಲ್ಲಿ) ಹಾಂ! ಹಾಂ! ಸಾಕಿನ್ನು ನೀನು ತಿರುಗಿ ವಾದಿಸೋದು! ಹೋಗು - ನನಗೆ ಆಫೀಸಿಗೆ ಹೋಗಬೇಕಾಗಿದೆ, ಬೂಟ್ಸ ತಕ್ಕೊಂಡು ಬಾ.

**ತರುಣಿ:**— (ಹಟದಿಂದ) ನಾನು ಸತ್ತೀನಿ ಅಂತ ಹೇಳಿದೆ, ತಿಳಿಯಲಿಲ್ಲೇನು ನಿಮಗೆ?

**ಮುದುಕ:**— ( ವಿಚಾರ ಗೊಂದಲದಲ್ಲಿ ಸಿಲುಕಿ ) **ಸತ್ತೀದಿ-ಅಂದರೆ ?**

**ತರುಣಿ:**— ( ಹೆಮ್ಮೆಯಿಂದ ) ನಿಮ್ಮ ಕೈಯೊಳಗಿಂದ ಪಾರಾಗೀನಿ ಅಂತ !

**ಮುದುಕ:**— ( ಗೊಂದಲ ಹೆಚ್ಚಾಗಿ ) ಅಂದರೆ? ಅಂದರೆ? ನನ್ನ ಕೆಲಸ ಯಾರು ಮಾಡಬೇಕು ? ನನ್ನ ಸೇವಾ ಯಾರು ಮಾಡಬೇಕು ?

**ತರುಣಿ:**— ಕೇಳಿಕೊಳ್ಳಿರಿ ನಿಮ್ಮ ಅನುಭವಕ್ಕೆ—ನಿಮ್ಮ ಆಫೀಸಿಗೆ ! ಈಗ-ಸದ್ಯಕ್ಕೆ-ನನ್ನ ಸೇವಾ ನೀನೇ ಮಾಡಬೇಕು....ನನಗೊಂದು ಗುಟುಕು ನೀರು ಕೊಡಬೇಕು.

**ಮುದುಕ:**— ( ಚಕಿತನಾಗಿ ) 'ನೀ' ! ನೀರು ! ನಿನಗೆ ಕೊಡಬೇಕೆ **ನಾನು** ?.... ಯಾಕೆ ? ....ಬುದ್ಧಿಭ್ರಂಶ ಆಗಿದೆಯೊ ನಿನಗೆ, ಏನು ಜೀವ ಬೇಡಾಗಿದೆಯೊ ?

**ತರುಣಿ:**— ( ಕನಿಕರ ತೋರಿಸುತ್ತ ) ಅಯ್ಯ ! ಪಾಪ ! ಈ ಮುದುಕನಿಗೆ ಬುದ್ಧಿಭ್ರಂಶಾನೂ ಆಗಿದೆ.... ' ಜೀವ ಬೇಡಾಗಿದೆ ಏನು ' ಅಂತ ನನಗೇ ಕೇಳ್ತಾನೆ ! ಇಷ್ಟರೊಳಗೇ ನಾನು ಸತ್ತದ್ದೂ ಮರೆತು ಹೋಯಿತೆ ? .... ( ಅಧಿಕಾರದ ದನಿಯಲ್ಲಿ ) ಆದರೆ ಮರೆತರೂ ಬಿಡುವಂತಿಲ್ಲ .... ಯಾಕಂದರೆ, ಈ ದಿನ ನನ್ನ ಶ್ರಾದ್ಧ—

**ಮುದುಕ:**— ( ದೈನ್ಯದಿಂದ ) ನನಗ ಆಫೀಸಿಗೆ ಹೋಗಬೇಕಾಗಿದೆ—ಮೀಟಿಂಗಿಗೆ ಹೋಗಬೇಕಾಗಿದೆ—ಅಯ್ಯೊ ! ಎಲ್ಲಿಯೊ ಹೋಗಬೇಕಾಗಿದೆಯೆ ನನಗೆ ?···· ನಾನು ಹೋಗಲೇ ಬೇಕು.

**ತರುಣಿ:**— ನನಗೂ ನನ್ನ ಆಫೀಸಿಗೆ ಹೋಗಬೇಕಾಗಿದೆ—ಬಹಳೊತ್ತು ರಜೆ ಇಲ್ಲ—ನೀರು ಕೊಡುವಿರೊ—ಇಲ್ಲ ಇಲ್ಲಿಂದಲೇ ಹಾರಿ ಹೋಗಿ ಪೋಲೀಸರಿಗೆ ಹೇಳಲಿಯೊ ನಾನು ಬಾವಿ ಬಿದ್ದು ಜೀವ ಯಾಕೆ ಕೊಟ್ಟೆ ಅಂತ ?

**ಮುದುಕ:**— ( ಕೈಮುಗಿದು ಬೇಡುತ್ತ ) ಇದು ನೋಡೆ—ಅಷ್ಟು ಮಾತ್ರ ಮಾಡಬೇಡ....ನೀನು ಎಲ್ಲರ ಹಾಗೆ ಸತ್ತಿರುವೆ ಅಂತ ಸಾಧಿಸಿಕೊಳ್ಳಲಿಕ್ಕೆ ನಿನ್ನ ಹೆಸರಿನಿಂದ ಇಳಿಸಿದ ಅರ್ಧ ವಿಮಾಹಣ ಕೊಡಬೇಕಾಯಿತು.... ಇಲ್ಲಿ ನೋಡು.... ಇಲ್ಲಿಂದಲೆ ಹಾರಿ ಹೋಗೋದು ಅಂದೆ

ಯಲ್ಲ? ಸತ್ತದ್ದೆ ನಿಜ ಆದರೆ ಒಂದು ನಿಮಿಷದೊಳಗೆ ಹಾರಿ ಸುತ್ತಾಡಿ ಎಲ್ಲಿ ಜನ ನನ್ನ ದಾರಿ ಕಾಯುತಾ ಕೂತಾರೆ ಅಂತ ತಿಳುಹಿಸ ಬಾರದೆ?....ನೋಡು, ಅಷ್ಟು ಉಪಕಾರ ಮಾಡಿದರೆ ಒಳ್ಳೇ ಥಾಟದ ಶ್ರಾದ್ಧ ಮಾಡತೀನಿ.... (ದಣಿದವನಂತೆ) ಅಯ್ಯೊ! ಏನು ನನ್ನ ಗತಿ? ಎಲ್ಲಿ ನಾನು ಹೋಗಲಿ? ಮೀಟಿಂಗಿಗೊ— ಆಫೀಸಿಗೊ? (ಎಂದು ತಲೆ ಹಿಡಿದುಕೊಂಡು ಕಣ್ಮುಚ್ಚಿ ಕುಳಿತುಕೊಳ್ಳುವನು.)

[ತರುಣಿ ತನ್ನ ಬಲಕ್ಕೆ ಏನನ್ನೊ ದಿಟ್ಟಿಸುವಂತೆ ಮಾಡುವಳು. ಕ್ರಮೇಣ ಅಲ್ಲಿ ಯುವಕನ ಮೂರ್ತಿಯೊಂದು ಕಾಣುವುದು.]

**ಯುವಕ**:— ಮುದಕಪ್ಪಾ, **ಇನ್ನೂ** ಆಫೀಸಿಗೆ ಹೋಗಿಲ್ಲವೆ?

[ತರುಣಿ 'ಸದ್ದು ಬೇಡ' ಎಂದು ಸನ್ನೆಯಿಂದ ಹೇಳುವಳು. ಯುವಕನು ಮೆಲ್ಲಗೆ ನಡೆದು ಬಂದು ಮೇಜು-ಬುಕ್‌ಸ್ಟ್ಯಾಂಡಗಳ ನಡುವೆ ನಿಂತು, ಮುದುಕ ನನ್ನು ದೃಷ್ಟಿಯಿಂದುದ್ದೇಶಿಸಿ, ಮುಗುಳ್ನಗೆಯಿಂದ ತರುಣಿಯನ್ನು ನೋಡಿ— -]

**ಯುವಕ**:— ಮುದುಕಪ್ಪ, ಇನ್ನೂ ಆಫೀಸಿಗೆ ಹೋಗಲಿಲ್ಲವೆ?

**ಮುದುಕ**:— (ಮುಖವನ್ನು ಮೇಲಕ್ಕೆತ್ತಿ ಲಗಬಗೆಯಿಂದ) ಹೋಗುವೆ–ಹೊರಟೆ (ಎಂದು ಏಳಬೇಕೆನ್ನುವಷ್ಟರಲ್ಲಿ ಮತ್ತೆ ವೇದನೆಯಿಂದ ನರಳುವನು).

**ಯುವಕ**:— (ಕನಿಕರ ತೋರಿಸಿ) ಅಯ್ಯೊ, ಪಾಪ! ಮನಸ್ಸು ಮುಂದರಿ ದರೂ ಕಾಲು ಕಿತ್ತೋದಿಲ್ಲ, ಅಲ್ಲವೆ?

**ತರುಣಿ**:— ಕಾಲೊಳಗೆ ಅದೇನೊ ಬೂಟು ಬೇಕಾಗಿವೆಯಂತೆ. (ಎಂದು ಅದೃಶ್ಯಳಾಗುವಳು.)

**ಯುವಕ**:— ಯಾರ ಕಾಲೊಳಗಿನವು?

**ಮುದುಕ**:— (ಯುವಕನನ್ನು ದಿಟ್ಟಿಸಿ) ಉದ್ಧಟ! ಯಾರೊ ನೀನು?

**ಯುವಕ**:— ನಿನ್ನ ಪ್ರಾಚೀನಕರ್ಮ ನಾನು, ಮುತ್ತಾತಾ. ನಿನ್ನ ಅನುಭವದ ಭೂತ ನಾನು. (ಹತ್ತಿರ ನಡೆದು ಬಂದು) ನೋಡು, ನನ್ನ ಪರಿಚಯ ಸಿಕ್ಕಿತೆ? ಇಪ್ಪತ್ತು ವರ್ಷಗಳ ಹಿಂದಿನ ಮಾತು. ನೀನು ಭೂಮಿ ಯಲ್ಲಿ ಉಳಿದು ಮುದುಕನಾಗಿರುವೆ, ನಾನು ಜೀವವನ್ನು ಬಿಟ್ಟು ತರುಣನಾಗಿಯೆ ಉಳಿದಿರುವೆ. ಪಾಪ! ಕಣ್ಣು ಕಾಣುವಂತಿಲ್ಲ!

**ಮುದುಕ**:— (ಚಕಿತನಾಗಿ) ಯಾರು — ಯಾರು ನೀನು? ನಿನ್ನ ದನಿಯು ಪರಿಚಯವಿದೆ ನನಗೆ.

**ಯುವಕ**:— ಆಹಾ! ಇದೀಗ ಸರಿಯಾದ ಮಾತು. ನನ್ನ ದನಿಯ ಪರಿಚಯುವಿದೆಯಂತೆ! ಮುದುಕನಾದ ಮೇಲೆ ಕೇಳಿಸುವುದಲ್ಲವೆ ನಿನಗೆ? ಆಗ—ಇಪ್ಪತ್ತು ವರ್ಷಗಳ ಮುಂಚೆ—ಗಟ್ಟಿಗನಿರುವಾಗ ಕೇಳಿಸಲಿಲ್ಲ ನಿನಗೆ, ಅಲ್ಲವೆ? ಅಂದು ಬೇಡಿಕೊಂಡೆ, ಕೂಗಿದೆ, ಹಲುಬಿದೆ—ನಿನಗೆ ಕೇಳಿಸಲಿಲ್ಲ.

**ಮುದುಕ**:— ನಿನಗೆ ಬೇಕಾದುದೇನು? ನನಗೆ ಆಫೀಸಿಗೆ ಹೋಗುವ ಅವಸರವಿದೆ, ಈಗ ಕಾಡಬೇಡ.

**ಯುವಕ**:— ( ತಿರಸ್ಕಾರದಿಂದ ) ಆಫೀಸಿನ ಅವಸರವಿಲ್ಲ, ಆಫೀಸಿನ ಭ್ರಾಂತಿ ಇದೆ ನಿನಗೆ!....ನನಗೆ ಬೇಕಾದುದೇನು?....ಇಂದು ನನಗೆ ಏನೂ ಬೇಕಿಲ್ಲ, ಪಿತಾಮಹಾ, ಕೇವಲ ನೀನು ಆಫೀಸಿಗೆ ಹೋಗುವುದನ್ನು ಕಣ್ಣಾರೆ ನೋಡಬೇಕಾಗಿದೆ....ನಾನೇ ಹೋಗಬೇಕಾಗಿತ್ತು ಆ ಆಫೀಸಿಗೆ....ಹೋಗುವಾಗ ಕಾಲಿಗೆ ತೊಡಕು ಹಾಕಿ ಮುಗ್ಗರಿಸುವಂತೆ ಮಾಡಿದೆ ನನ್ನನ್ನು!....ಅಂದೇ ನನ್ನ ಪ್ರಾಣ ಹೋದಂತಾಯಿತು....ಮುಂದೆ ಪ್ರಾಣ ಹೋದಂದಿನಿಂದ ನಿನ್ನನ್ನೆ ಕಾದುಕೊಂಡೆ ನಿಂತಿರುವೆ....

**ಮುದುಕ**:— ( ಅರ್ಧ ತನ್ನಷ್ಟಕ್ಕೆ ) ನನಗೆ ಭ್ರಾಂತಿ! ನಾನು ಪಿತಾಮಹ!.. ಆಫೀಸು!.... ಮೀಟಿಂಗು!.... ಅಯ್ಯೋ! ಈ ಗೊಂದಲವನ್ನು ತಪ್ಪಿಸಲಿಕ್ಕಾದರೂ ಸಾಯಬಾರದೆ ನಾನು? ( ಕಣ್ಮುಚ್ಚುವನು ಕೈಗಳಿಂದ )

**ಯುವಕ**:— ಮುತ್ತಾತಾ, ನಿನಗೆ ಜಾಗೆ ಇಲ್ಲ; no vacancy ! ಇಹಲೋಕದಲ್ಲಿ no vacancy ಎಂದು ನನಗೆ ಹೇಳಿದ್ದಿಯಲ್ಲವೆ?.... ಈಗ ಪರಲೋಕದಲ್ಲಿ ನಿನಗೆ no vacancy ....

**ಮುದುಕ**:— ( ಕಣ್ತೊರಿಸಿಕೊಂಡು ಅವನನ್ನು ದಿಟ್ಟಿಸುತ್ತ ) ಪರಲೋಕ! ( ಹೆದರುತ್ತ ) ಪರಲೋಕ? ಒಲ್ಲೆ, ಒಲ್ಲೆ, ನನಗೆ ಪರಲೋಕ ಬೇಡ! ನನಗೆ—( ಒಮ್ಮೆಲೆ ತಡೆದು ) ವಂಚಕ! ಕಿಡಿಗೇಡಿ! ಮುದುಕನೆಂದು ತಿಳಿದು ನನ್ನ ಕೀಟಲೆ ಮಾಡಲು ಬಂದಿರುವೆಯಾ? ಯಾರಲ್ಲಿ?

ಹುಸೇನಿ ಇಬ್ರಾಹಿಂ-ಘೋಕ್ರಾ-ವ್ಯ್ರಾನ್– (ಯುವಕನು ಗಟ್ಟಿಯಾಗಿ ನಗಲು) ನಗುವೆಯಾ? ನನ್ನ ಅಪಹಾಸ ಮಾಡುವೆಯಾ? ನಾನು ಯಾರೆಂದು ತಿಳಿದಿರುವೆ?

**ಯುವಕ:**— (ನಗೆ ತಡೆದು, ಕೈಮುಗಿದು, ಕಣ್ಮುಚ್ಚಿ) ಮಹಾನುಭಾವಾ, ಮುದಿ ರಾಯಾ, may your tribe increase! (ಕಣ್ದೆರೆದು, ದಿಟ್ಟಿಸಿ, ಕನಿಕರದಿಂದ) ಪಾಪ! ನನ್ನನ್ನು ಹೆದರಿಸಬೇಕೆಂಬ ಮುದಿಹುಚ್ಚು! .... ಹ ಹ! .... ಅನಂತನಾರೀನಾರಾಯಣಾ, ಬವಲೀ ಬಾದ ರಾಯಣಾ, ನನಗೆ ಯಾರ ಹೆದರಿಕೆಯೂ ಇಲ್ಲ! ನಾನು ಭೂತ! ಪಿಶಾಚಿ! ದೆವ್ವನಿರುವೆ ನಾನು!

**ಮುದುಕ:**— (ಚಕಿತನಾಗಿ) ಭೂತ! ದೆವ್ವ! ಪಿಶಾಚಿ!

**ಯುವಕ:**— (ತಲೆದೂಗುತ್ತ) ಅದೇ ನಾನು ಹೇಳಿದ್ದು. ಇರುವಾಗ ನನ್ನ ಹಂಬಲ ಕೇಳಿಸದ ನಿನಗೆ, ಸತ್ತ ನನ್ನ ಒಂದೊಂದು ಶಬ್ದವೂ ಕೇಳಿ ಸುವುದಲ್ಲವೆ? ಇರುವಾಗ ನನ್ನಿಂದ ಸೇವೆ ದೊರೆಯಲಿಲ್ಲ ನಿನಗೆ, ನಾನು ಸತ್ತಮೇಲೆ ದೊರಕಿಸಿಕೊಂಡಿರುವಿ, ನೆನಪಿದೆಯೆ? ಮ್ಯುನಿಸಿ ಪಾಲಿಟಿ ಚುನಾವಣೆಯಲ್ಲಿ ಸತ್ತ ನನ್ನ ವೋಟನ್ನು ಹಾಕಿಸಿಕೊಂಡು ನನಗೆ ಪುನರ್ಜನ್ಮವನ್ನು ಕೊಟ್ಟ ಪರಬ್ರಹ್ಮ ನೀನು....ಒಂದೇ ಒಂದು ವೋಟಿನಿಂದ ಆರಿಸಿ ಬಂದೆ ನೀನು—ಆ ವೋಟು ನನ್ನದು!

**ಮುದುಕ:**— (ತಲೆ ಜಾಡಿಸುತ್ತ) ಸುಳ್ಳು—ಸುಳ್ಳು! ನೀನು ಸತ್ತಿಲ್ಲ....ನಾನು ನಿಜವಾಗಿ ಆರಿಸಿಬಂದಿರುವೆ....ಬೇಕಾದರೆ ಇನ್ನೊಮ್ಮೆ ಮತಗಳನ್ನು ಎಣಿಸಲಿ—ಇನ್ನೊಮ್ಮೆ ಚುನಾವಣೆ ನಡೆಯಲಿ—

**ಯುವಕ:**— (ನಡುವೆಯೆ) ಮುದಿರಾಯಾ, ಸೈರಿಸುವಂತಹನಾಗು.... ಈಗ ನಡೆದಿದೆ ಇನ್ನೊಂದು ಚುನಾವಣೆ—ಪರಲೋಕದಲ್ಲಿ....ಇದೇ ಈಗ ನೀನು ಸಾಯಬೇಕು ಎಂದೆಯಲ್ಲ....ಅದಕಾಗಿ ಒಂದು ಯುಕ್ತಿ ಯನ್ನು ಹೇಳುವೆ....ಸದ್ಯಕ್ಕೆ ನಿನಗೆ ಆ ಲೋಕದಲ್ಲಿ ಜಾಗೆ ಇಲ್ಲ, ನನಗೆ ಈ ಲೋಕದಲ್ಲಿ ಜಾಗೆ ಇಲ್ಲ....ಈಗ ನೀನು ಸಾಯುವೆ ಯಂತೆ, ನಾನು ಬದುಕುವೆ. ನಮ್ಮಿಬ್ಬರ ಸ್ಥಾನಗಳನ್ನು ಪರಸ್ಪರ

ಬದಲಾಯಿಸಿಕೊಳ್ಳೋಣ.... ನಿನ್ನ ಸ್ಥಾನ, ನಿನ್ನ ಮಾನ, ನಿನ್ನ ಮನೆ, ನಿನ್ನ ಹೆಂಡತಿ ಇವನ್ನು ನನಗೆ ಕೊಟ್ಟು ಬಿಡು———

**ಮುದುಕ:—** (ಕಿವಿ ಮುಚ್ಚಿಕೊಂಡು ಸಂತಾಪಾತಿರೇಕದಿಂದ) ಎಲಾ ಪಾಪಿ! ಚಾಂಡಾಲಾ! ದುಷ್—ಧು - (ಎಂದು ಉಸಿರು ಸಾಲದೆ ತಡೆಯುವನು)

**ಯುವಕ:—** (ಸಮಾಧಾನಗೊಳಿಸುತ್ತ) ಹಂ—ಕೂಗಬೇಡ.... ಉಸಿರು ಸಾಲದೆ ಪ್ರಾಣ ಹೋದೀತು! ಸಾಯುವ ಮುಂಚೆ ನಮ್ಮ ಎಕ್ಸ್‌ಚೇಂಜ ಕಾಂಟ್ರಾಕ್ಟಿಗೆ ಸಹಿ ಹಾಕು....

**ಮುದುಕ:—** (ಸಿಟ್ಟಿನಿಂದ ಹತಾಶನಾಗಿ) ಅಯ್ಯೋ ಏನು ಮಾಡಲಿ?

**ಯುವಕ:—** (ಬಾಯ್ದೆರೆದು ಬೇಡುವ ಹುಡುಗನಂತೆ) 'ಹುಂ' ಅಂದುಬಿಡು, ಅಜ್ಜ; ಹುಂ!

**ಮುದುಕ:—** (ತಲೆ ಹಿಡಿದುಕೊಳ್ಳುತ್ತ) ರಾಮಾ! ರಾಮಾ! ಏನಿದು? ನನ್ನ ಪಾಪದ ಮೂರ್ತಿಯೆ ನನ್ನೆದುರು ನಿಂತಿದೆಯೆ? (ಯುವಕನಿಗೆ, ಸಿಟ್ಟು ತಡೆಯದೆ) ಎಲೊ! ನಿಜವಾಗಿಯೆ ನೀನು ಪಿಶಾಚಿ! ಏನೆಂದು ತಿಳಿದಿರುವೆ? ನಾನೂ ನಿನ್ನಂತೆ ಅನಾಚಾರಿ ಎಂದು ತಿಳಿದಿರುವೆಯಾ?

**ಯುವಕ:—** (ಗಲ್ಲ ಬಡೆದುಕೊಳ್ಳುತ್ತ, ಸೋಗಿನ ನಮ್ರತೆಯಿಂದ) ಶಾಂತಂ ಪಾಪಂ! ಅಜ್ಜ, ನೀನು ಅನಾಚಾರಿಯೆ? ಶಾಂತಂ ಪಾಪಂ! ಸದಾಚಾರಿ ನೀನು, ಬ್ರಹ್ಮಚಾರಿ ನೀನು, ಭೀಷ್ಮಾಚಾರಿ ನೀನು! ತಿಳಿಯದ ತರುಣರಿಗಾಗಿ ಕನ್ಯೆಯರನ್ನು ಅಪಹರಿಸುವ ಭೀಷ್ಮನಂತೆ ನೀನೂ ನನ್ನಂತಹರಿಗಾಗಿ ಕನ್ಯೆಯರನ್ನು ಕಾದಿಟ್ಟಿರುವೆ; ಅದಕಾಗಿಯೆ ವಿಚಿತ್ರವೀರ್ಯನಾದ ನಾನು ಸಂಸಾರದ ಎಕ್ಸಚೇಂಜ್ ಬೇಡಿರುವೆ.... ಭೀಷ್ಮ! ....ಛೆ—ಭೀಷ್ಮನಿಗಿಂತಲೂ ಮೇಲು! ಹೆಂಗಸರಿಗೆ ಬೆನ್ನು ತೋರುವ ಭೀಷ್ಮನೆಲ್ಲಿ? ಬೆನ್ನೆ ಇಲ್ಲದೆ ಹೆಂಗಸರನ್ನು ಎದುರಿಸುವ ನೀನೆಲ್ಲಿ? ಪಿತಾಮಹಾ, ಪೆನ್‌ಶನ್‌ದ ಸ್ವಾಹಾ——

**ಮುದುಕ:—** ಅಯ್ಯೋ! (ಎಂದು ಚೀರುತ್ತ ಗಟ್ಟಿಯಾಗಿ ಕೈಗಳಿಂದ ಮುಖ ಮುಚ್ಚಿಕೊಳ್ಳುವನು.)

**ಯುವಕ:—** (ತಿರಸ್ಕಾರದಿಂದ) ಭೀಷ್ಮ!

[ ' ಆ ಭೀಷ್ಮನ ಶಿಖಂಡಿ ನಾನಿದ್ದೇನೆ, ಇಲ್ಲಿ ' ಎಂದು ನುಡಿಯುತ್ತ, ಯುವಕನ ಇದಿರು ಮೂಲೆಯಲ್ಲಿ ಮಧ್ಯವಯಸ್ಕಳಾದ ಹೆಂಗಸಿನ ಮೂರ್ತಿಯೊಂದು ಎದ್ದು ನಿಲ್ಲುವುದು. ಯುವಕನು ಚಕಿತನಾಗಿ ಅವಳನ್ನು ನೋಡುವನು. ಅವಳಾದರೂ ತಾಯ್ತನದ ಮುಗುಳ್ನಗೆಯಿಂದ ಅವನನ್ನು ನೋಡುತ್ತ ತಲೆದೂಗುವಳು; ಆ ಮೇಲೆ ಮುದುಕನ ಕಡೆ ಕರುಣಾಪೂರಿತ ದೃಷ್ಟಿಯನ್ನು ಬೀರುತ್ತ — ]

**ಹೆಂಗಸು**:— ಕೇಳಿದಿರಿಲ್ಲೊ ಹ್ಯಾಂಗ ಗೋಳಿಡ್ತಾನ ನಮ್ಮಪ್ಪ ಈಗ— ' ನನ್ನ ಹೆಂಡತಿ, ನನಗ ಹೆಂಡತಿ ಬೇಕೂಂ ' ತ? ಎರಡನೆಯ ಹೆಂಡತಿ ಸತ್ತು ಮೂರನೆಯ ಮದುವೆ ಮಾಡಿಕೋ ಮುಂಚೆ ನಾನು ಹೇಳಿದೆ-- ನನ್ನ ಕೂಡ ಎಷ್ಟು ಸಲಿಗೆ ಇತ್ತೂ ಅಂತೀರಿ? — ' ಮದಿವೆ ಮಾಡಿಕೋಬೇಡ. ನಿನ್ನ ವಯಸ್ಸಿಗೆ ಮದುವೆ-ಹೆಂಡತಿ ಮಾನಕ್ಕೂ ಸಾಲೋದಿಲ್ಲ, ಮನೆತನಕ್ಕೂ ನಡೆಯೋದಿಲ್ಲ, ಮುಪ್ಪಿಗಂತೂ ಆಧಾರೇ ಅಲ್ಲ ' ಅಂತ.... ಮೊದಲೇನೋ ' ಹುಂ ಹುಂ ' ಅಂದ, ನನ್ನ ಕಡೆ ಬರತಿದ್ದ ಹೋಗತಿದ್ದ, ನಾನೂ ಮನೆಯವನೇ ಅಂತ ನಡೆಸಿಕೊಂಡು ಇದ್ದೆ. ಕಡೆಗೆ ಅಂತೂ ಏನೊ ಒಂದು ಅಡಚಣಿ ಅಂತ ನನ್ನದೇ ಒಂದೆರಡು ಸಾವಿರ ದುಡ್ಡು ಒಯ್ದ; ಒಯ್ಯುವಲ್ಲನ್ಯಾಕ, ಇಂದಿಲ್ಲ ನಾಳೆ ನಾನು ಅವನೂ ಒಂದೇ ಅಂತ್ಮಾಡಿದ್ದೆ. ಅದರೆ ಎಂದೊ ಒಂದಿವಸ ಯಾವುದೊ ಒಂದು ಹುಡುಗೀನ್ನ ಮದುವೆ ಅಂತ ಮಾಡಿಕೊಂಡು ನನ್ನನ್ನ ತುಳಿದು--ತುಳಿದು ಯಾಕೆ?--- ಅವನೇ ಆಧಾರ ಅಂತ ತಿಳಿದುಕೊಂಡಿದ್ದ ನನ್ನ ಮೈಮ್ಯಾಲಿನ ಹುಳದ ಹಾಂಗ ಜಾಡಿಸಿ ಹೋಗಿಬಿಟ್ಟ!

[ ಯುವಕನು ಗಟ್ಟಿಯಾಗಿ ನಗುವನು ]

**ಹೆಂಗಸು**: — ಸಾಕು ನಗುವಿರೇನು ?

**ಯುವಕ**:— ( ನಗೆ ತಡೆಯುತ್ತ ) ಅಲ್ಲ—ಭೀಷ್ಮನ ಶಿಖಂಡಿ ಅನ್ನೋ ವಿಚಾರಕ್ಕೆ————

**ಹೆಂಗಸು**:— ( ಅಪಮಾನಿತಳಾಗಿ ) ಅವ ಭೀಷ್ಮ ಅಂತ ಹೇಳದಿರಿ ಅಂದ ಮ್ಯಾಲೆ-

**ಯುವಕ**:— ( ಗಂಭೀರವಾಗಿ ) ನೀನು ಶಿಖಂಡಿ ಅನ್ನೋ ಮಾತಿಗೆ ನನ್ನದು ಎಳ್ಳಷ್ಟಾದರೂ ವಿರೋಧವಿಲ್ಲ, ಜಗದಂಬೇ, ಅಲ್ಲ ' ಅಂಬೇ ', ಅಲ್ಲ

'ಅಂಬಿಕೇ' (ಒಮ್ಮೆಲೆ ಸಂಶಯದಿಂದ) ಏನು ಅಂಬಾಲಿಕಾನೋ (ಎನುತ್ತ ಕೈಮುಗಿದು ಮಾಯವಾಗುವನು)

**ಮುದುಕ:**— (ನರಳುತ್ತ) ಅಯ್ಯೋ! ನನಗೆ ಯಾರೂ ಗತಿ ಇಲ್ಲ!

**ಹೆಂಗಸು:**— (ನಡೆದು ಬಂದು, ಬೆನ್ನ ಮೇಲೆ ಕೈಯನಾಡಿಸುತ್ತ) ಯಾರೂ ಗತಿ ಇಲ್ಲೇನೆ ನನ್ನ ಮನಮೋಹನನಿಗೆ? ಏನು ಬೇಕಾಗಿದೆ ನನ್ನ ದೊರೆಗೆ?

**ಮುದುಕ:**— (ಮುಖ ತೆರೆದು ಅವಳನ್ನು ನೋಡಿ) ಯಾರು? ಯಾರು ನೀನು? (ಹೆದರಿಕೆಯಿಂದ ಗಟ್ಟಿಯಾಗಿ) ಸರಿ ದೂರ! ಇಲ್ಲಿ ಯಾಕೆ ಬಂದೆ?

**ಹೆಂಗಸು:**— (ಆಶ್ಚರ್ಯಚಕಿತಳಾದವಳಂತೆ) ಅಯ್ಯ! ಯಾವಾಗ ನೋಡಿದಾಗೂ ಬಿಂ ಅಂತ ಬಿಗಿದುಕೊಂಡೇ ಕೂತಿರತಾನಲ್ಲ? ಯಾರೂ ಗತಿ ಇಲ್ಲ ಅಂತ ಗೋಳಿಡತಿದ್ದಿ, ಅದನ್ನ ಕೇಳಿ ಬಂದರೆ——

**ಮುದುಕ:**— (ನಡುವೆಯೆ) ರಾಮಾ! ರಾಮಾ! ಯಾವ ಹಾಳು ಕುಲದ ಡಾಕಿನಿ ಇದು ನನಗೆ ಗಂಟು ಬಿದ್ದಿತು?

**ಹೆಂಗಸು:**— (ತಟ್ಟನೆ ದೂರ ಸರಿದು ಅಭಿಮಾನದಿಂದ) ಡಾಕಿನಿ! ಯಾಕೊ, ನಮ್ಮಪ್ಪ? ನಾನು ಡಾಕಿನಿ ಅಂತೇ ಮನೆಯೊಳಗಿನ ಮೋಹಿನೀನ್ನ ಬಿಟ್ಟು ನನ್ನ ಕೂಡ ಇರತಿದ್ದೆಯಲ್ಲ? ಎಷ್ಟು ಚಂದ ಚಂದ ಮಾತು ಹೇಳತಿದ್ದೆಯಲ್ಲೊ, ನನ್ನ ಚಂದಪ್ಪ! 'ತಿಳಿದು ಪ್ರೀತಿ ಇಟ್ಟದ್ದು ಅಂದರೆ ನಿನ್ನಲ್ಲೇ ನೋಡು. ನೀನು ನನ್ನ ಬುದ್ಧಿಯ ಹೆಂಡತಿ, ಮನೆಯೊಳಗಿನದು ಅಂದರೆ ಕಟ್ಟಿಕೊಂಡ ಗುದ್ದೀ-ಹೆಂಡತಿ' ಅಂತ! ಇದ್ದ ಎರಡು ಮಕ್ಕಳು ನಿನ್ನ ದೊಡ್ಡತನ ಕಾಯಬೇಕು ಅಂತ ಅಪ್ಪನ ಹೆಸರ ಹೇಳದೇ ಸತ್ತು ಹೋದುವು! ಅಂದರೂ ನಾನು 'ಕುಂಯ್' ಅನ್ನಲಿಲ್ಲ. ಸತ್ತ ಮೇಲೂ ನಿನ್ನ ಮನೆಯ ಹಿತ್ತಲದೊಳಗಿನ ಹುಣಸೇಮರದೊಳಗೇ ಇದ್ದೀನಲ್ಲದೆ ಮತ್ತೊಬ್ಬನ್ನ ಕಣ್ಣೆತ್ತಿ ನೋಡಲಿಲ್ಲ, ಕೈಮಾಡಿ ಕರೆಯಲಿಲ್ಲ. ಇದ್ದಾಗ, ನಾಲ್ಕು ಮಂದಿಯೊಳಗ ನನ್ನ ಗುರುತು ಹಿಡಿಯಲಾರದ ಹಾಗ ಮಾಡತಿದ್ದೆ. ಈಗ ಸತ್ತು ಬಂದೀನಿ————

**ಮುದುಕ**:— ( ನಡುವೆಯೆ ಆಶಾಯುಕ್ತದನಿಯಿಂದ ) ಸತ್ತಿರುವೆಯಾ? ನಿಜವಾಗಿ ಸತ್ತಿರುವೆಯಾ?

**ಹೆಂಗಸು**:— ದೆವ್ವಿನಾಣೆ, ನಮ್ಮಪ್ಪ! ಸತ್ತುಹೋಗೀನಿ.

**ಮುದುಕ**:—(ಒಮ್ಮೆಲೆ ಯೋಜನೆಯಲ್ಲಿ ಸಿಕ್ಕಿಕೊಂಡು ) ಇವಳೂ ಸತ್ತಿರುವಳಂತೆ! ಸತ್ತಿದ್ದವರೆ ನನ್ನ ಮನೆಯಲ್ಲಿ ಯಾಕೆ? ನನ್ನ ಮನೆ ಎಂದರೆ ಸ್ಮಶಾನವೆ? (ನೋಡುವುದರಲ್ಲಿ ಹೆಂಗಸು ಮಾಯವಾಗಿರಲು ) ಅಹುದು— ಇದು ಸ್ಮಶಾನ! ಅದಕ್ಕೆಂದೇ ಭೂತ-ಪಿಶಾಚಿ-ಡಾಕಿನಿಗಳು ಮಿಂಚಿ ಸುಳಿದಾಡುತ್ತಿವೆ! ಬೇಡ— ಈ ಮನೆ ಬೇಡ! ( ಏಳಲು ಯತ್ನಿಸಿ) ಇದೇನು? ನನ್ನ ಕಾಲ್ಗಳೇ ಏಳಲೊಲ್ಲವು! ನನಗೆ ಹೆದರಿಕೆಯಾಗತೊಡಗಿದೆ! ಕಾಲು! ಕಾಲು! ( ಎಂದು ಕುಳಿತಲ್ಲಿಯೆ ಚಡಪಡಿಸುವನು).

[ 'ಕಾಲು! ಕಾಲು!' ಎಂದು ಅಣಕಿಸುತ್ತ ತರುಣಿ ಮೊದಲಿನ ಸ್ಥಳದಲ್ಲಿ ಕಾಣಿಸುವಳು ]

**ತರುಣಿ**:— ( ಅಣಕಿನ ದನಿಯಲ್ಲಿಯೆ ) ಆಹಾ! ಓಡಿ ಹೋಗಬೇಕೆಂದಿದ್ದೆಯಾ? ನನ್ನ ಅನ್ನನೀರನ್ನು ತಪ್ಪಿಸಬೇಕೆಂದಿದ್ದೆಯಾ?

**ಮುದುಕ**:— ( ಹತಾಶನಂತೆ ) ಯಾರದು? ( ನೋಡಿ, ಸಂಶಯದಿಂದ ) ನನ್ನ ಹೆಂಡತಿ?

[ 'ಅಲ್ಲ' ಎನ್ನುತ್ತ ಯುವಕನು ಕಾಣಿಸುವನು ]

**ಯುವಕ**:— ಅಲ್ಲ....ಆಕೆ ನನ್ನ ಹೆಂಡತಿ....

**ಮುದುಕ**:— ( ಏನೂ ತಿಳಿಯದೆ ) ನಿನ್ನ ಹೆಂಡತಿ! ಹಾಗಾದರೆ — ನನ್ನ ಹೆಂಡತಿ———?

**ತರುಣಿ**:— ಸತ್ತಳು.

**ಯುವಕ**:— ಅದಕಾಗಿಯೆ ಹೇಳಿದೆ ನನ್ನ ಕೈಯಲ್ಲಿ ತಿಲೋದಕವನ್ನು ಬಿಡು ಎಂದು—

[ 'ತಿಲೋದಕದ ಸಮುದ್ರ- ಈ ಗೃಧ್ರ' ಎನುತ್ತ ಎಡಬದಿಗೆ ಮಧ್ಯವಯಸ್ಕದ ಗೃಹಸ್ಥನು ಕಾಣಿಸುವನು. ತರುಣಿಯೂ ಯುವಕನೂ ಚಕಿತರಾಗಿ ಅವನನ್ನು ನೋಡುವರು ]

**ಗೃಹಸ್ಥ**:— ತಿಲೋದಕದ ಸಮುದ್ರ ಈ ಗೃಧ್ರ....ಯಾಕೆಂದರೆ, ಎಷ್ಟು ಜನರ ಜೀವ ನುಂಗಿರುವನೊ! ಎಲ್ಲರ ಶ್ರಾದ್ಧ ಮಾಡಿಸುವ ಅಧಿಕಾರ ಇವನಿಗಿದೆ....ಇಡಿಯ ಸಮಾಜಕ್ಕೆಯೆ ಪುರೋಹಿತನಿವ—

**ಮುದುಕ:**— ( ಅಳುದನಿಯಲ್ಲಿ ) ಅಯ್ಯೊ ! ಇದಾವ ಭೂತ ?

**ತರುಣಿ:**— ನನ್ನ ಗಂಟಲು ಬತ್ತಿದೆ, ಬೇಗ—ನೀರು

**ಯುವಕ:**— ನನ್ನ ಹೃದಯ ಬತ್ತಿದೆ, ಬೇಗ—ನೀರೆ—

**ಗೃಹಸ್ಥ:**— ನನ್ನ ಸಂಚಾರ ಬತ್ತಿದೆ, ಬೇಗ—ವ್ಯವಸ್ಥೆ—ಮಾಡೋಣ. (ಮುದುಕನಿಗೆ) ಅಹುದು ನಾನು ಭೂತ. ಆದರೆ ನಿನಗೆ ನಭೂತ ಅನುಭವ ಕೊಡಲು ಬಂದಿರುವೆ, ನಿನ್ನ ಶ್ರಾದ್ಧ ಮಾಡಲು ಬಂದಿರುವೆ—

**ಮುದುಕ:**— ( ಕುಳಿತಲ್ಲಿಯೆ ಚೀರುತ್ತ ) ಬೇಡ, ಬೇಡ, ಒಲ್ಲೆ - ನಾನಿನ್ನೂ ಸತ್ತಿಲ್ಲ !

**ಗೃಹಸ್ಥ:**— ಅದಕಾಗಿಯೆ ನಿನ್ನ ಶ್ರಾದ್ಧ. ಎಷ್ಟು ಜನರು ಜೀವದಿಂದಿರುವಾಗಲೆ ಅವರ ಶ್ರಾದ್ಧವನ್ನು ನೀನು ಮಾಡಿಲ್ಲ ?

**ಮುದುಕ:**— ( ಗಾಬರಿಯಿಂದ ಚಡಪಡಿಸುತ್ತ ) ಅಯ್ಯೊ ! ಅಯ್ಯೊ ! ನನಗೆ ಶ್ರಾದ್ಧ ಬೇಡ....ನಾನು ಸಾಯೋದಿಲ್ಲ....ನಾನು ಇರೋದೂ ಇಲ್ಲ–ಎಲ್ಲಿಯಾದರೂ ಹೋಗತೀನಿ—

[ ' ನನ್ನ ಕೂಡ ಬಾ ಅಂತ ಹೇಳಲಿಲ್ಲ ? ' ಎನ್ನುತ್ತ ಹೆಂಗಸು ಮತ್ತೆ ಕಾಣಿಸುವಳು. ]

**ಹೆಂಗಸು:**— ಬರತೀಯಾ ನನ್ನ ಕೂಡ ಹುಣಸೇಮರಕ್ಕೆ ? ( ಎಂದು ಹತ್ತಿರ ಬರಲು )

**ಮುದುಕ.**— ( ಮುಖ ಮುಚ್ಚಿಕೊಳ್ಳುತ್ತ ) ಯಾರು ನೀನು ? ನಿನ್ನ ಮುಖ ನೋಡಲಾರೆ ( ಬೆನ್ನು ತಿರುವಲು )

**ಯುವಕ:**— ( ಚಪ್ಪಾಳೆ ತಟ್ಟಿ ) ನಿಜ....ಶಿಖಂಡಿಗಾಗಿ ಬೆನ್ನ ತಿರುಗಿಸಿದ !

**ತರುಣಿ:**— ( ಹೆಂಗಸನ್ನು ನೋಡಿ ) ನನಗೆ ಈ ಸವತಿ ಇದ್ದಾಳೆ ಅಂತ ಗೊತ್ತಿದ್ದರೆ ನಾನೆಲ್ಲಿ ಬಾವಿ ಬಿದ್ದು ಜೀವ ಕೊಡತಿದ್ದೆನೆ ?

**ಗೃಹಸ್ಥ:**— ( ನಕ್ಕು ) ಶಿಖಂಡಿ ! ಭೀಷ್ಮ ! ಹಹ ! ಮುದಿರಾಯಾ, ದೊಡ್ಡ ಸಂಸಾರದ ಪರಾಕ್ರಮ ನಿನ್ನದು ಅಂತ ಗೊತ್ತಿರಲಿಲ್ಲ ನನಗೆ ! ಹೀಗಿದ್ದರೆ— ವೈಭವದಿಂದ ಜರುಗಬೇಕು ನಿನ್ನ ಶ್ರಾದ್ಧ.

**ಯುವಕ:**— ಶಾಂತಂ ಪಾಪಂ ! ಅವನಿಗೆಲ್ಲಿಯ ಸಂಸಾರ ? ಕಲಿಯುಗದ

ಭೀಷ್ಮನವ! ಕೇಳಿದಿರಿಲ್ಲೊ ಅವನ ಪ್ರತಿಜ್ಞೆಯನ್ನು? . ಅವನು ಸಾಯುವುದಿಲ್ಲವಂತೆ!

**ಗೃಹಸ್ಥ:**— ಸಾಯುವುದು ಯಾರಿಗೆ ಬೇಕಾಗಿದೆ? ಹಾಗೇ ಶ್ರಾದ್ಧ ಮಾಡೋಣ

**ಮುದುಕ:**— (ಅಳುದನಿಯಲ್ಲಿ) ಇಲ್ಲ, ನಾನು ಸಾಯುವುದಿಲ್ಲ, ನನಗೆ ಶ್ರಾದ್ಧ ಬೇಡ....ದಯಮಾಡಿ ಬಿಟ್ಟುಬಿಡಿರಿ ನನ್ನ....ನನಗೆ ಬಹಳ ಕೆಲಸಗಳಿವೆ....ಮೀಟಿಂಗಿಗೆ--ಏನು ಆಫೀಸಿಗೊ? — ಎಲ್ಲಿಯೊ ಹೋಗಬೇಕಾಗಿದೆ ನನಗೆ—

**ಯುವಕ:**— ಇಚ್ಛಾಮರಣಿ ನೀನು!

**ಗೃಹಸ್ಥ:**— ಅದಕಾಗಿ ಬಿಡುವಿದ್ದಾಗ, ಬೇಕಾದಾಗ, ಅನುಕೂಲ ನೋಡಿ ಕೊಂಡು ಸಾಯುವೆಯಂತೆ. ಸದ್ಯಕ್ಕೆ ಸಂಸಾರ ಯುದ್ಧಕ್ಕೆ ಬೇರೊಬ್ಬ ತರುಣ ಸೇನಾಪತಿ ಬೇಕಾಗಿದ್ದಾನೆ—ಆದ್ದರಿಂದ-ದಯ ವಿಟ್ಟು ಶರ-ಪಂಜರದಲ್ಲಿ ಮಲಗಿಕೊ.... (ಅವನ ಹತ್ತಿರ ಹೋಗುವನು).

**ಹೆಂಗಸು:**— (ಅರ್ಥ ತಿಳಿಯದೆ) ಮಲಗಿಕೋ ಅಂತಾರೆ, ಮಲಗಬಾರದೆ? ನನ್ನ ತೊಡಗೆ ತಲೆ ಇಟ್ಟು ಮಲಗುವೆಯೇನು?

**ಮುದುಕ:**— (ಭ್ರಮಿಷ್ಟನಂತೆ) ಆಫೀಸು! .... ಮೀಟಿಂಗ .... ಡೈರೆಕ್ಟರ್ಸ (ಒಮ್ಮೆಲೆ ನಿದ್ದೆಯಿಂದ ಎಚ್ಚೆತ್ತಂತೆ) ಯಾವ ಡೈರೆಕ್ಟರ್ಸ?

**ಗೃಹಸ್ಥ:**— (ಅವನ ಕೈಹಿಡಿಯುತ್ತ) ಶ್ರಾದ್ಧದ ಡೈರೆಕ್ಟರ್ಸ————

**ಯುವಕ:**— (ಮತ್ತೊಂದು ಬದಿಯಿಂದ ಕೈಹಿಡಿದು ಎಬ್ಬಿಸುತ್ತ) ಸುರುವಾಗಲಿ ಹಾಗಾದರೆ ಶೂಟಿಂಗ.....ಹಂ....ಮಂತ್ರ ಹೇಳುವೆ ನಾನು——— (ಇದು ನಡೆವಾಗ ಇಬ್ಬರೂ ಮುದುಕನನ್ನು ಮೆಲ್ಲಗೆ ಎಬ್ಬಿಸಿ ನಡೆಸುವರು. ಅವನು ಜೀವಕಳೆ ಇಲ್ಲದೆ ಗೊಂಬೆಯಂತೆ ನಡೆಸಿದತ್ತ ನಡೆಯುವನು). ಶಯನಂ ಕಲ್ಪಯಾಮಾಸುಃ, ಹಂ—ಹಾಸಿಗೆ ಹಾಕಿರಿ— (ಹೆಂಗಸು ಒಂದು ಬಟ್ಟೆಯನ್ನು ಕೆಳಗೆ ಹಾಸಿ ಕುರ್ಚಿಯ ಮೇಲಿದ್ದ ಆಸನವನ್ನು ತಲೆದಿಂಬಿ ಗಿರಿಸುವಾಗ) ಕಾಲು ದಕ್ಷಿಣದ ಕಡೆ————

**ಗೃಹಸ್ಥ:**— ಯಾಕೆಂದರೆ ದಕ್ಷಿಣೆಗಾಗಿ ಬಂದವರಿಗೆ ಕಾಲು ತೋರಿಸುತ್ತಿದ್ದ ಈತ—

**ಯುವಕ**:— ಭೀಷ್ಮಾಯ— ಕೆಳಗೆ ಹಾಕರಿ ಇವನ್ನ; ಅಮಿತ ಕರ್ಮಣೇ— ಬಹಳ ಕೆಲಸ ತನಗೆ ಅಂತ ಹೇಳುತ್ತಿದ್ದನಲ್ಲವೆ ? ಸೋಪಧಾನಂ— (ಹೆಂಗಸಿಗೆ) ತಲೆದಿಂಬು — ಅಪ್ಪ, ಶಿಖಂಡೀ— ಅಲ್ಲ, ಅಮ್ಮಾ, ಶಿಖಂಡೀ—ಏನು ಅಪ್ಪನ್ಮಾನೊ ?.... ತಲೆದಿಂಬು (ಅವಳು ಸರಿಯಾಗಿ ಇರಿಸುವಳು) (ಮುದುಕನನ್ನು ಮಲಗಿಸುತ್ತ) ನರವ್ಯಾಘ್ರ— ಯಾಕೆಂದರೆ ಹುಲಿಯ ಹಾಗೆ ಮಂದಿಯ ಜೀವ ನುಂಗತಿದ್ದ.... ಶರೈಃ ಸನ್ನತ ಪರ್ವಭಿಃ (ಎನ್ನುತ್ತ ಮಲಗಿಸಿ ನಿಂತು ಕೈ ಜಾಡಿಸುತ್ತ) ಶರಾ ಬರೆಯಿರಿ ಅಂತ———

[ತೆರೆಯು ಕೆಳಗೆ ಬರುವುದು. ಆಗ ಮೇಲಿನ ಶ್ಲೋಕವನ್ನು ಪೂರ್ತಿಯಾಗಿ ಮತ್ತೊಮ್ಮೆ ನುಡಿಯುಬೇಕು. ಮತ್ತೆ ತೆರೆ ಏಳುವುದು. ಮುದುಕ ಹಾಗೆಯೆ ಮಲಗಿದ್ದಾನೆ. ಬಲಬದಿಗೆ ತರುಣಿ, ಯುವಕ; ಎಡಬದಿಗೆ ಗೃಹಸ್ಥ, ಹೆಂಗಸು. ಮುದುಕನನ್ನು ಒಮ್ಮೆ ನೋಡಿ ಯುವಕನು ತರುಣಿಯ ಕೈಹಿಡಿದು ಹೋಗುವನು. ಇತ್ತ ಗೃಹಸ್ಥನು ನಗೆಮೊಗದಿಂದ ತಲೆಸನ್ನೆಯಿಂದ ಕರೆಯಲು ಹೆಂಗಸು ಆವನನ್ನು ಹಿಂಬಾಲಿಸಿ ಹೋಗುವಳು. ಒಂದರೆ ನಿಮಿಷ ಸದ್ದಿಲ್ಲದೆ ತಡೆದು—ಕೊನೆಗೆ ಸಾವಕಾಶವಾಗಿ ತೆರೆಯನ್ನು ಕೆಳಗಿಳಿಸಬೇಕು.]

ಮುಗಿದುದು.



ಹಾದಿಯ ಹೊತ್ತಿಗೆ ೨

# ಉತ್ತರ-ರಂಗ

( ಕೊಂಕು ಏಕಾಂಕ)



ಬರೆದವರು

ಶ್ರೀರಂಗರು



ಕನ್ನಡ ಸರಸ್ವತಿ ಭಾಂಡಾಗಾರ
— ಧಾರವಾಡ —

ಬೆಲೆ ೩ ಆಣೆ

# ಪಾತ್ರವಿವರ

ಗ್ರಂಥಕರ್ತ—ನಾಟಕಕಾರ
ಮಾಲಕ—ನಾಟಕ ಕಂಪನಿಯ ಒಡೆಯ
ಪಡದೆಯುವ—
ಗುರುರಾಜ—
ನಗೆಯ ನಿಂಗಪ್ಪ—

ವಿ. ಸೂ.:— ಶ್ರೀರಂಗರ ಸಮ್ಮತಿ ಇಲ್ಲದೆ ಈ ನಾಟಕವನ್ನು ಆಡಕೂಡದು.

# ರಂಗಸೂಚನೆ

[ ಒಂದು ನಾಟ್ಯಗೃಹದ ಒಳಗಣ ದೃಶ್ಯ. ನಮಗೆ ಕಾಣಿಸುವುದು ರಂಗಭೂಮಿ ಮಾತ್ರ. ಮುಂದಿನ ತೆರೆ ಮೆಲ್ಲನೆ ಬೀಳುತ್ತಿರುವುದು; ನೆಲವನ್ನು ಮುಟ್ಟಿದ ಕ್ಷಣ ತಟ್ಟನೆ ಮೇಲೇಳುವುದು ಪ್ರೇಕ್ಷಾಗೃಹದಿಂದ ಆಗಾಗ ಚಪ್ಪಾಳೆ, ಸಿಳ್ಳು, ಕೂಗು, ಆಕಳಿಕೆ, ನಗೆ ಮುಂತಾದ ಸದ್ದು ಕೇಳಬರುತ್ತಿರುವುದು. ಒಂದೆರಡು ನಿಮಿಷಗಳಲ್ಲಿ ಪ್ರತಿನಿತ್ಯದ ಸಾದಾ ಉಡುಪು-ತೊಡಪುಗಳನ್ನು ಧರಿಸಿದ ವ್ಯಕ್ತಿಯೊಂದು ಬದಿಯಿಂದ ಬಂದು, ತೆರೆಯ ಮುಂ . ನಿಂತು, ಕೈಮುಗಿದು, ಶಾಂತರಾಗಿರೆಂದು ಕೈಸನ್ನೆಗಳಿಂದ ತಿಳುಹಿಸಿ ಕೊನೆಗೆ ಶಾಂತವಾಗುವ ಲಕ್ಷಣಗಳೆ ತೋರದಿರಲು— ]

**ವ್ಯಕ್ತಿ** :— ( ಗಟ್ಟಿಯಾಗಿ ಕಿರಚುತ್ತ ) ಸಭಿಕರೆ–(ಇನ್ನೂ ಶಾಂತವಾಗಿಲ್ಲವೆಂದು ಕಂಡು) ಭಲೆಲೆಲೆಲೆ ಸಾರಥೀ, ನಾಟಕ ಕಂಪನಿ ಮಾರತೀ— ( ನಗೆಯಿಂದ ) ಕಂಪನಿ ಮಾರೋದೆಂದ ಕೂಡಲೆ ಶಾಂತರಾದರೀಜನ ! ( ವಿನಯವನ್ನು ನಟಿಸುತ್ತ ಸೌಮ್ಯವಾಗಿ ) ಸಭ್ಯಸಭಿಕರೆ—ಅರ್ಥಾತ್ ಪ್ರೇಕ್ಷಕರೆ—ಎಂದರೆ ಇದುವರೆಗೆ ನಾಟಕವನ್ನೆ ನೋಡಿದ ನರಸಿಂಹಗಳೆ–ಮೊದಲು ' ನಾನು ಯಾರು ಮತ್ತು ಯಾಕೆ ಇಲ್ಲಿ ಬಂದೆ ' ಎಂಬೋದನ್ನ ಹೇಳ್ತೀನಿ. ನೀವು ಇದುವರೆಗೆ ನೋಡಿದಿರಲ್ಲ ಆ ನಾಟಕ—ಏನು ? ಏನಂದಿರಿ ? ಕೇಳಿಸಲಿಲ್ಲ ?—( ಗಟ್ಟಿಯಾಗಿ ಕೂಗುತ್ತ ) ನೀವು ಇದುವರೆಗೆ ನೋ— ( ಒಮ್ಮೆಲೆ ತಡೆದು ) ಏನಂದಿರಿ ? ಕೇಳಿಸತದೆ ? ಮತ್ತೆ ಕೇಳಿಸಲಿಲ್ಲ ಅಂದಿರಲ್ಲ ? ಏನು ? ನಾಟಕಾನೆ ಕೇಳಿಸಲಿಲ್ಲ ? ಅದಕ್ಕೇ ನಾ ಹೇಳಿದೆ ' ನೀವು ಇದುವರೆಗೆ **ನೋಡಿದ ನಾಟಕ** ' ಅಂತ....ಹಹ ! ಅಲ್ಲ— ಅಂದ್ರ—ಹಂ....ಆ ನಾಟಕ ಬರೆದವ ನಾ....ನಾಟಕದೊಳಗ ಸಂಗೀತ ಇಲ್ದಿದ್ರೂ ಕೂಡ ನೀವು ತಲೆತೂಗತಾ ರಸಾಸ್ವಾದನೆ ಮಾಡಿದಿರಿ, ಅದಕಾಗಿ ನಾನು ನಿಮ್ಮ ಕುರ್ಚಿಯೊಳಗಿನ ತಗಣಿಗಳಿಗೆ ಕೃತಜ್ಞ ನಾಗೀನಿ....ಎರಡನೇ ಮಾತಂದ್ರೆ, ನಾಟಕದ ಕೊನೆಗೆ ಒಂದಿಷ್ಟು ಸಂಗೀತ ಇದ್ದಿತಲ್ಲ ? ಪ್ರಾರ್ಥನಾ ಸ್ತೋತ್ರ—ಅಂದ್ರೆ ದೇವರ ಸ್ತೋತ್ರ ಅಲ್ಲ ಮತ್ತೆ—ಲಕ್ಷ್ಯದಲ್ಲಿರಲಿ....ಅದು ನಿಮ್ಮ ಸ್ತೋತ್ರ, ನೆರೆದ ವಿದ್ವನ್ಮಹಾಮಣಿಗಳೆ, ನಿಮ್ಮೆಲ್ಲರ ಸ್ತೋತ್ರ. ಅದನ್ನ ಕೊನೆಗೆ ಇಟ್ಟಿದ್ದ

ಕಾರಣಾಂದ್ರೆ — ಇಂಥಾ ನಮ್ಮ ಹೊಸತರದ ಹಳೆಯ ಸಾಮಾಜಿಕ ನಾಟಕವನ್ನ ಕೊನೆಯುವರೆಗೆ ನೋಡೋ ಕಣ್ಮುಚ್ಚಿದ ಕಂಠೀರವರನ್ನ ಒಂದು ಹಾಡಿನಿಂದ ಸ್ತುತಿಸಲೇ ಬೇಕು ಅಂತ....ಅದೇ ಹಾಡಿನ ಇನ್ನೊಂದ ವಿಷಯ....ಹಳೆಯ ಕಾಲದ ನಾಟಕ ಬೆಳಗಿನ ತನಕ ನಡೆಯೋದರಿಂದ ಅಲ್ಲಿ ಕೊನೆಯ ರಾಗ ಭೈರವಿ ಇರತಿತ್ತಂತೆ..ಆದರೆ ನಮ್ಮ ಹೊಸ ನಾಟಕ ಮಧ್ಯರಾತ್ರಿಗೇ ಮುಗಿಯೋದರಿಂದ ನಮ್ಮ ಕೊನೆಯ ರಾಗ ಮಾಲಕಾಂಶ....ತಾವು ನಗಬಾರದು .... ಇಡಿಯ ನಾಟಕ ನೋಡುವಾಗ ನಗಲಾರದ ತಾವು ಈಗ ನಕ್ಕು ನೋವು ಮಾಡಿಕೋ ಬಾರದು .... **ಮಾಲಕಾಂಶ** ಎಂದು ನಾ ಬೇಕಂತ್ಲೇ ಹೇಳೀನಿ.... ಯಾಕಂದ್ರೆ ಅದರಲ್ಲಿ ಮಾಲಕರ ಅಂಶವೇ ಹೆಚ್ಚು—ಅದರಲ್ಲಿ ಅಂದ್ರೆ ನಾಟಕ ಮುಗಿಯೋದರಲ್ಲಿ....ಆದ್ದರಿಂದ ನನ್ನಂತೆ ಅವರೂ ತಮ್ಮ ಕೃತಜ್ಞತೆಯನ್ನ—(ಎನುತ್ತ ಬದಿಗೆ ನಗೆಯಿಂದ ಸ್ವಾಗತಿಸುವಂತೆ ನೋಡುವನು. ಸಾವಕಾಶವಾಗಿ, ಇನ್ನೊಬ್ಬರ ಬಲುಮೆಗಾಗಿ ಎಂಬಂತೆ, ಒಳಗಿನಿಂದ **ಮಾಲಕನು** ಬರುವನು. ಅವನ ಒಂದು ಕೈಯಲ್ಲಿ ನಾಟಕದ ಹಾಳೆಗಳೂ, ಇನ್ನೊಂದು ಕೈಯಲ್ಲಿ ಗಂಟೆ, ಬಾಯಿಯೊಳಗೆ ಸೀಟಿ ಇದೆ. ಅಧೈರ್ಯದಿಂದ ಬರುವಾಗ ಪ್ರೇಕ್ಷಕರೂ ಗ್ರಂಥಕರ್ತನೂ ಚಪ್ಪಾಳೆ ತಟ್ಟಲು ವಿನಯದಿಂದ ಕೈಮುಗಿಯು ಹೋಗುವನು. ಕೂಡಲೆ ಕೈಯೊಳಗಿನ ಗಂಟೆ ಬಾರಿಸುವುದು. ಗಂಟೆ ಬಾರಿಸುವುದೊಂದೇ ತಡ ಮೇಲಿನಿಂದ ತೆರೆ ಇಳಿಯು ವುದು. ಅದನ್ನು ತಡೆಯಲು ಕೂಗಬೇಕೆನುವಾಗ ಬಾಯಿಯೊಳಗಿನ ಸೀಟಿ ಊದುವುದು. ದೀಪಗಳು ಆರುವುವು. ತೆರೆ ದೊಪ್ಪೆಂದು ಬೀಳುವುದು).

[ಕೆಲಹೊತ್ತು ನಿಃಶಬ್ದತೆ]

[ಇಷ್ಟರಲ್ಲಿ ಒಮ್ಮೆಲೆ ಗಂಟೆ-ಸೀಟಿಗಳ ಕೋಲಾಹಲವೇಳುವುದು. ದೀಪಗಳು ಹತ್ತುವುವು. ತೆರೆ ಏಳುವುದು. ] (ಗ್ರಂಥಕರ್ತನು ಬೆವತು ಬೆಪ್ಪಾದ ಮುಖದಿಂದ ಕೈಮುಗಿದು) 'ಮಹನೀಯರೆ, ಕ್ಷ—' (ಮುಂದೆ ನೋಡಿ ಯಾರೂ ಇಲ್ಲೆಂದು ಕಂಡು ಅದನ್ನೆ ಕೈಯಿಂದ ಸೂಚಿಸುತ್ತ) ಕ್ಷ— ಯಂ (ಎಂದು ಹತಾಶನಾಗಿ ನಿಲ್ಲುವನು. ಇಷ್ಟರಲ್ಲಿ ಮಾಲಕನು ಕೋಪಾವೇಶದಿಂದ ಸೀಟಿಯನ್ನೂದುತ್ತ ಯಾರನ್ನೊ ಕರೆಯುವವನಂತೆ, ಅತ್ತಿತ್ತ ನೋಡುತ್ತ, ನೋಡಿದಂತೆ ಗಟ್ಟಿಯಾಗಿ ಊದುತ್ತ ಬರಲು-ಸಿಟ್ಟಿನಿಂದ) ಸಾಕ್ಮಾಡಬಾರದೆ ನಿಮ್ಮ ಸೀಟಿ ಶಂಖಾಯಮಾನವನ್ನ ! ಹಾಳಾಯ್ತು ನಿಮ್ಮ ವ್ಯವಸ್ಥಾ

ಇನ್ನೂ ಒಂದು ದೃಶ್ಯ ಉಳಿದಿತ್ತು, ಪಡದೆ ಬಿಟ್ಟು ಬಿಟ್ಟರಿ, ಜನರೆಲ್ಲ ಹೋಗಿಬಿಟ್ಟರು ! ಹಾಳಾಯ್ತು ನಿಂ ವ್ಯವಸ್ಥಾ ! (ಗೊಣಗುವನು)

**ಮಾಲಕ:—** (ತಡೆಯುವ ಸಿಟ್ಟಿನಿಂದ ತೊದಲಿಸುತ್ತ) ಪ್-ಪ್-ಪಡದೆ ಬಿಟ್ ಬಿ-ಬಿ-ಬ್ಬಿಟ್ರಿ ಅಂದ್ರ — ಪ್-ಪ್-ಪ್ಪಡದೆ ಏರಿಸೋವ ಇಯಿ-ಯಿ-ಯಿಳಿಸೋವ ನಾ ಅಂತ್-ತ್‌ತಂತಂತಂತನ್ ತಿಳಿದ್ರೊ ಏನು ? (ತಿರಸ್ಕಾರದಿಂದಲೂ ದಣಿವನ್ನಾರಿಸಿಕೊಳಲೂ ದೀರ್ಘವಾದ ಉಸಿರನ್ನೆಳೆದು) ನಾಟಕದ ಹಣೆಬರಹಾನೆ ಅಷ್ಟು ! ಪಡದೇಕ್ಕ ಸಹಿತ ತಿಳೀತು ' ಇಂಥಾ ನಾಟಕ ಸಾಕು, ' ಅಂತ ! ಹುಃ ! ವ್ಯವಸ್ಥಾ ಅಂತ ವ್ಯವಸ್ಥಾ ! ಸುಮ್ನಿನ್ನೆ ಸೀಟಿ ಊದಿ ಉಗುಳ ಒಣಗಿಸಿಕೊಂಡೆ !

**ಗ್ರಂಥಕರ್ತ —** (ತ್ವೇಷದ ದನಿಯಲ್ಲಿ ) ಸ್ವತಃದ ಉಗುಳ ಒಣಗಿಸಿಕೊಂಡ್ರೆ ಮುಗಿಲಿಲ್ಲ.

**ಮಾಲಕ:—** (ಪ್ರೇಕ್ಷಾಗೃಹದ ಒಂದು ಗೋಡೆಯನ್ನು ತೋರಿಸುತ್ತ) ನೋಡಿದಿರಾ ಅಲ್ಲಿ ? ಈಗ ನನಗ ತಿಳೀತು 'ಉಗುಳ ಬಾರದು ' ಅನ್ನೋ ನೋಟೀಸ ಯಾಕ ಹಚ್ಚ್ತಾರೆ ಅಂತ! ಇಲ್ಲಾ ಅಂದ್ರೆ ಪ್ರೇಕ್ಷಕರದೂ ಸಹಿತ ಉಗುಳು ಒಣಗಿ ಹೋಗ್ತಿತ್ತು ಈ ಹೊತ್ತು.

**ಗ್ರಂಥಕರ್ತ:—** (ಒಳಗೆ ನೋಡುತ್ತ) ಏ-ಬಾರೊ ಇಲ್ಲಿ ! (ಪಡದೆಯುವನು ಬರಲು, ಗದ್ದರಿಸುತ್ತ) ಯಾರು ಹೇಳಿದ್ದರೊ ನಿನಗೆ ಪಡದೆ ಬಿಡಲಿಕ್ಕೆ ? ಹುಂಬ ! ನಾಟಕದ ಸುರುವಿಗೆ ತೆಂಗಿನ ಬದಲು ನಿನ್ನ ತಲೆ ಒಡೆಯ ಬೇಕಾಗಿತ್ತು ನೋಡು!....ನಿಂತೇನು? ಯಾರು ಹೇಳಿದರು ನಿನಗ ಪಡದೆ ಬಿಡಲಿಕ್ಕೆ-ಅಂತೀನಿ....

**ಪಡದೆಯುವ :—** (ಮಾಲಕನನ್ನು ನೋಡುತ್ತ) ಇವರು ಗಂಟೀ ಸೀಟೀ ಎರ್ಡೂ ಬಡ್ಯಾಕ್ಹತ್ತಿದರಿ—ಕೈಗೆ ಉಗುಳು ಹಚ್ಚಾಕ ಅವಸರಿಲ್ದಾಂಗ ಆತರಿ—ಇವರ್ಹೊಡಿದಿದ್ದಿಲ್ಲಾ ಅಂದ್ರ—

**ಮಾಲಕ :—** (ನಡುವೆಯೆ) ಏನೊ — ಗಂಟಿ ನಾ ಹೊಡೆದನ್ನ್ಯಾ ತಾನೇ ಹೊಡೀತೊ ? ಗಂಟೀ ಹೊಡೀಬೇಕಾದ್ರ ಸ್ಟೇಜಿನ ಮ್ಯಾಲೆ, ಮುಂದಿಯ

ಮುಂದೆ ಬಂದು ನಿಲ್ತೀನೆ ? ನಾ ಇಲ್ಲಿ ಸ್ಟೇಜಿನ ವ್ಯಾಲೆ ನಿಂತಿದ್ನೊ ಇಲ್ಲೊ ?

**ಪಡದೆಯುವ :—** (ಹಾರಿಕೆಯ ದನಿಯಲ್ಲಿ) ಯಾರೊ ನಿಂತಿದ್ದರಿ—

**ಮಾಲಕ :—** ಯಾರೊ—ಅಂದ್ರ....ನಾನೂ ನಿನಗ ಪಾರ್ಟ ಮಾಡವ್ರ ಹಾಂಗ ಕಂಡೆನೆ ?

**ಪಡದೆಯುವ :—** (ಗ್ರಂಥಕರ್ತರನ್ನು ನೋಡುತ್ತ) ನಾಟಕಾನೇ ಹಾಂಗೈತ್ರಿ. ಯಾರ ಯಾರ್ಹಾಂಗ ಕಾಣೋದೇನ್ ? ಒಂದು ಜರತಾರಿ ಇಲ್ಲ. ಒಂದು ಶ್ಲೋಕ ಇಲ್ಲ....ಪಾರ್ಟ ಅಂತ ತಿಳ್ಯೋದು ಹ್ಯಾಂಗ್ರಿ ?.... ಅದೇ ಹೇಳಿದೆನಲ್ರಿ–(ಗೊಣಗುತ್ತ ಒಳಗೆ ಹೋಗುವವನು)

**ಮಾಲಕ :—** (ಸಿಟ್ಟಿನಿಂದ ಪಡದೆಯುವ ಹೋದತ್ತ ನೋಡುತ್ತಿರುವ ಗ್ರಂಥಕರ್ತನನ್ನು ದಿಟ್ಟಿಸುತ್ತ) ಪಾರ್ಟ ಅಂತ ತಿಳ್ಯೋದು ಹ್ಯಾಂಗಂತ!....ಹಹ!.... ನಾಟಕ ಅಂತ ತಿಳಿಯೋದು ಹ್ಯಾಂಗ ಅಂತ ನನಗ ಗೂಢ ಬಿದ್ದಿದೆ ಇಲ್ಲಿ....(ಗ್ರಂಥಕರ್ತನು ಒಮ್ಮೆಲೆ ತನ್ನನ್ನು ತಿರುಗಿ ನೋಡಲು) ಇಂಥಾ ನಾಟಕಕ್ಕೆ ವ್ಯವಸ್ಥಾ ಬೇಕಂತೆ ! (ಗಂಟೆಯನ್ನು ಬಿಸುಟುವವನು, ಸೀಟಿಯನ್ನು ಕಿಸೆಗಿರಿಸುವವನು)

**ಗ್ರಂಥಕರ್ತ :—** (ಸಿಟ್ಟು ತಡೆಯುತ್ತ) ನಾಟಕ ಎಂಥದು ಅಂಬೋ ಮಾತು ನಮಗ ನಿಮಗ ಯಾಕೆ? ನೋಡಲಿಕ್ಕೆ ಬಂದವರು ಕಡೆತನಕ ಕೂತರೊ ಇಲ್ಲೊ ?

**ಮಾಲಕ :—** (ತಿರಸ್ಕಾರ ದನಿಯಲ್ಲಿ) ಹೊರಗೆ ಧೋಧೋ ಅಂತ ಮಳೆ ಸುರೀತಿತ್ತು–ಅದೂ ನಾಟಕದ ದೊಡ್ಡ ಗುಣ ಏನು ?

**ಗ್ರಂಥಕರ್ತ :—** (ಸಿಟ್ಟು ತಡೆಯದು ಎಂಬಂತೆ) ಅಂದ್ರೆ ಕಂಪನಿಯ ಮಾಲಕ ಸುರಿಸಿದ್ದೇನು ಮಳೆ ?....(ತಿರಸ್ಕಾರದ ಉಸಿರೆಳೆದು) ಜನರಿಗೆ ಎಂಥಾ ನಾಟಕ ಬೇಕು ಅಂಬೋದು ಗೊತ್ತಿಲ್ಲ ಇವರಿಗೆ—

**ಮಾಲಕ :—** (ಗಟ್ಟಿಯಾಗಿ ಕೈಮುಗಿದು) ಮಹಾಸ್ವಾಮೀ, ಜನರಾಯ್ತು, ನೀವಾಯ್ತು. ನಾವು ನಾಟಕಾ ಮಾಡೋದು ನಮ್ಮ ಹೊಟ್ಟೆಗಾಗಿ.

**ಗ್ರಂಥಕರ್ತ :—** ಇದೊಳ್ಳೆಯ ನ್ಯಾಯ ? ಅಂದ್ರೆ ನಾವೂ ನಮ್ಮ ಹೊಟ್ಟೆಗಾಗಿ

ನಾಟಕಾ ಬರಿಯುಬಾರದೇನೋ ? (ಅತ್ತಿತ್ತ ನೋಡುತ್ತ) ಎಂತಹ ರಂಗ-ಭೂಮಿ ! ಕೂಡಬೇಕೆಂದ್ರ ಒಂದು ಕುರ್ಚಿ ಇಲ್ಲ !

**ಮಾಲಕ:—** (ಅಣಕಿಸಿಂದ) ಕಲಿಯುಗದ ಕಾಳಿದಾಸ ಪ್ರಭೋ, ಎಂತಹ ರಂಗಭೂಮಿ ಅಲ್ಲ, ಎಂತಹ ನಾಟಕ—ಅನ್ನಿರಿ ...ನಿಮ್ಮ ನಾಟಕದೊಳಗ ಒಂದು ಸೀನದೊಳಗಾದರೂ ಕುರ್ಚಿ ಬೇಕಾಗತದೇ ?....ಬರೆಯುವವರಿಗೆ ಗೊತ್ತಿಲ್ಲ ಅಂದ್ರ ಹೋಗಲಿ....ನಾನು—ಅನುಭವ ಇದ್ದವ ಹೇಳ್ತೀನಿ – 'ರಾಯರೆ, ಒಂದೆರಡು ಕುರ್ಚಿ, ಒನ್ನೊವ್ಮೆ ಸೋಫಾ, ಒಂದು ಟೇಬಲ್ಲು—ಇಟ್ಟರ ರಂಗ ಏರ್ತದೆ ಅಂತ, ಆದ್ರೆ-(ಅಣಕಿಸುತ್ತ) 'ಅಂಥಾ ನಾಟಕ ಅಲ್ಲ ಇದು ಅಂತ !.... ಈಗ ಯಾರಿಗೆ ಹೇಳ್ತೀರಿ-ಕೂಡಬೇಕಂದ್ರ ಒಂದು ಕುರ್ಚಿ ಇಲ್ಲ ಅಂತ? ....(ಒಳಗೆ ನೋಡಿ)ಎ-ಯಾರಿದ್ದೀರಿ ಅಲ್ಲಿ—ಒಂದೆರಡು ಕುರ್ಚಿ ತಕ್ಕೊಂಡು ಬರ್ರಿ....(ಗ್ರಂಥ ಕರ್ತನಿಗೆ) ನಿಮ್ಮ ಹೊಟ್ಟಿಗಾಗಿ ಬರೀರಿ ನೀವು ಬೇಕಾದಷ್ಟು ನಾಟಕ, ಬ್ಯಾಡ ಅನ್ನೋರು ಯಾರು—ಆದರೆ ನಮ್ಮ ಹೊಟ್ಟೆಯ ವ್ಯಾಲಿ ಕಾಲು ಕೊಡೋ ನಾಟಕ ನಮಗ ಸಾಕು ಅಂದೆ....(ಒಳಗೆ ನೋಡುತ್ತ ಸಿಟ್ಟಿನಿಂದ) ಏ, ಯಾರಿದ್ದೀರಿ ಒಳಗೆ ಅಲ್ಲಿ? ಕುರ್ಚಿ ತಕ್ಕೊಂಡು ಬಾ ಅಂತ ಹೇಳಿದೆ, ಕೇಳಿಸಿತೊ ಇಲ್ಲೊ ? (ಶತಪಥವನ್ನು ಸುತ್ತುವನು).

**ಗ್ರಂಥಕರ್ತ:—** (ಅಸಹ್ಯದ ದನಿಯಲ್ಲಿ) ಹೊಟ್ಟಿಗಾಗಿ ನಾಟಕಾ ಬರೆಯೋದಂತೆ! ಈ ದಡ್ಡತನಕ್ಕೆ ನಕ್ಕು ನೋವು ಮಾಡಿಕೊಳ್ಳೋದೇ ನಮ್ಮ ಹೊಟ್ಟೆಯ ಸುಖ!....(ನೋಡುತ್ತ) ಒಟ್ಟು ಕಂಪನಿಯೊಳಗೇ ಕುರ್ಚಿ ಇದ್ದಹಾಗೆ ಕಾಣೋದಿಲ್ಲ. (ನಿರಾಶೆಯ ದನಿಯಲ್ಲಿ) ಆಯ್ತು....ನಮ್ಮಂತಹರ ಹಗುರ ಹೊಟ್ಟಿ ಹೊತ್ತು ಕಾಲು ನೋಯುದು ಅಷ್ಟೆ, ಕುರ್ಚಿ ಬೇಕಾಗೂದು ಅಷ್ಟೆ....

**ಮಾಲಕ :—** (ಅಪಮಾನಿತನಾಗಿ, ಒಳಗೆ ನೋಡುತ್ತ) ಏ — ನಿಮಗೇನು ಕಿವಿ ಇವೆಯೊ, ಏನು ಬುರುಡೆಯೊಳಗಿನ ಹೊಗೆ ಹೋಗೋದಕೆ ಕಿಂಡಿ ಇವೆಯೊ....ಕುರ್ಚಿ—(ಎನುತ್ತ ಬದಿಗೆ ಹೊರಡುವಷ್ಟರಲ್ಲಿ ಪಡದೆಯುವನು ಒಳಗಿನಿಂದ ಎರಡು ಕುರ್ಚಿಗಳನ್ನು ತರುವನು. ಆದರೆ ಅವನ ಹಿಂದಿನಿಂದಲೆ ಇನ್ನೊಂದು ವ್ಯಕ್ತಿ ಮುಖಕ್ಕೆ ಬಡೆದುಕೊಂಡ ಬಣ್ಣ ತೊಳೆಯದೆ, ತಲೆಗೂದ

ಲನ್ನು ಹರಿಬಿಟ್ಟು, ಕೊಳೆದೋತರದ ಲುಂಗಿಯುನ್ನು ಸುತ್ತಿಕೊಂಡು, ಕೈಯ್ಯಲ್ಲಿ ಸಿಗರೇಟನ್ನುರಿಸುತ್ತ ಬರುವದು. ಪಡದೆಯುವನು ಎರಡೂ ಕುರ್ಚಿಗಳನ್ನಿಡು ವನು. ಆದರೆ ಹೊಸತಾಗಿ ಬಂದ ಈ ವ್ಯಕ್ತಿ ಅವನನ್ನು ಹೆದರಿಸುತ್ತಲೆ ಬರು ವುದು. 'ಏ—ಎಲ್ಲಿ ನಡೆದೆ ಕುರ್ಚಿ ತಕ್ಕೊಂಡು–ಏ-ಯಾಕೊ- ವ್ಯೆಯೊಳ ಗಿನ ಸೊಕ್—' ಎನುವಾಗ ಮಾಲಕನನ್ನು ನೋಡಿ ತಡೆಯುವುದು. ಮಾಲಕ ಸಿಟ್ಟಿನಿಂದಲೂ ಆಶ್ಚರ್ಯದಿಂದಲೂ ಅವನನ್ನು ನೋಡುತ್ತ) ಏನೊ–ಏನೊ ಇದು, ಗುರುರಾಜ ?

**ಪಡದೆಯುವ :**— ಕುರ್ಚಿ ಅಲ್ಲಿ ಬಣ್ಣದ ಕ್ವಾಣ್ಯಾಗ ಇಟ್ಟಿದ್ರಿ—ಮಾಲಕ ಸಾಬರಿಗೆ ಬೇಕು ಅಂದ್ರ್ಯಾ—ಬ್ಯಾಡ ಅಂತ ಗಟ್ಮುಟ್ಟಿ ಕುಂತ್ಕೊಂಡು ಬಿಟ್ಟಿದ್ದಿರಿ—

**ಮಾಲಕ :**— (ಸುಮ್ಮನಿದ್ದ ಗುರುರಾಜನಿಗೆ) ಗ್ರೀನ್ ರೂಮ್‌ದೊಳಗೆ ಕುರ್ಚಿ ಯಾಕೊ! ಗುರುರಾಜ ?

**ಗ್ರಂಥಕರ್ತ :** – (ಒಂದು ಕುರ್ಚಿಯಲ್ಲಿ ಕುಳಿತುಕೊಳ್ಳುತ್ತ) ವ್ಯವಸ್ಥಾನೇ ಹಾಗಿ ದ್ದರೆ ಯಾರ್ದೇನು ತಪ್ಪು ? (ಕುಳಿತವನೆ ತಟ್ಟನೆದ್ದು) ಅಯ್ಯಯ್ಯೊ ! ಏನಿದೆ ಈ ಕುರ್ಚಿಯ ಮ್ಯಾಲೆ ? (ಎಂದು ಹೌಹಾರಿದವನಂತೆ ನಟಿಸುವನು. ಗುರು ರಾಜನು ಮುಗುಳ್ನಗೆಯಿಂದ ನೋಡುವನು)

**ಮಾಲಕ :**— (ಧಾವಿಸಿ ಬಂದು) ಏನಿದೆ ? (ಗುರುರಾಜನನ್ನು ನೋಡುತ್ತ) ಮಾತ ಯಾಕೆ ಆಡಲೊಲ್ಲೆಯೊ ? ಈಗೇನು ನಾಟಕ ನಡೆದಿದೆ ಅಂತ ತಿಳಿದೀ ಯೇನು—ಹಿಂದಿನಿಂದ ಪ್ರಾಂಪ್ಟರನ ಹಾದಿ ನೋಡೋವ್ರು ಹಾಗ ? (ಏರುತ್ತಿರುವ ಸಿಟ್ಟಿನಿಂದ) ಹಲ್ಲು ಯಾಕೆ ಕಿರಿಯುವೆ ?

**ಗುರುರಾಜ :** – (ನಗೆ ತಡೆಯುತ್ತ) ಖೊ-ಖೊ-ಖ್-ಖೋಬ್ರಿ ಎಣ್ಣೆ ಬಿದ್ದೇತಿ ಆ ಕುರ್ಚಿಮ್ಯಾಲೆ !

**ಗ್ರಂಥಕರ್ತ :**— (ಒಮ್ಮೆಲೆ ಗದ್ದರಿಸುತ್ತ) ಕೊಬ್ಬರಿ ಎಣ್ಣೆ ! ಕೊಬ್ಬರಿ ಎಣ್ಣೆಯ ಮ್ಯಾಲೆ ಕೂತೆನೆ ನಾ ? ಹಾಳಾಯ್ತು ! ಇನ್ನೇನು ಬಿಸಿಲೊಳಗೆ ಶೀರ್ಷಾಸನ ಮಾಡಲಿಯಾ ? ಯಾರ ಕೊಡತಾರೆ. ನನ್ನ ದೋತರದ ಡ್ಯಾಮೇಜಿಸ್ ? (ಹಣೆ ಬಡೆದುಕೊಳ್ಳುವನು)

**ಮಾಲಕ:—** (ಸಮಾಧಾನದ ಸೋಗಿನ ದನಿಯಲ್ಲಿ) ಮಹಾಸ್ವಾಮೀ, ಒಂದು ದೋತರಕ್ಕಾಗಿ ಇಷ್ಟು ರಂಬಾಟ ನಿಮ್ಮದು! ನನ್ನ ಕಂಪನಿಯ ಮ್ಯಾಲೇ ಎಣ್ಣೆ ಸುರುವಿದಿರಲ್ಲ ತಾವು, ಇದರ ಡ್ಯಾಮೇಜಿಸ್ ಕೊಡೋರು ಯಾರು?

**ಪಡೆಯುವ:—** (ಏನೂ ತಿಳಿಯದ ಆಶ್ಚರ್ಯದಿಂದ) ಮತ್ತ ಅದರಿಂದ ಎಣ್ಣೆ ಡಾಗ ಹೋಗತಿದ್ದರ ನಮಗೂ ಒಂದೀಟು ಡಾಮೀಜಿಸ್ ಕೊಟ್ರಿ—

**ಮಾಲಿಕ:—** (ಸಿಟ್ಟಿನಿಂದ) ಏ-ನಡೆಯೊ, ಶುಂಭ! (ಪಡೆಯುವನೂ ಗುರುರಾಜನೂ ಹೊರಡಲು, ಗುರುರಾಜನಿಗೆ) ಏ-ಗುರೂ-ಇಬ್ಬರೂ ಶುಂಭರಿಗೆ ಹೋಗಲಿಕ್ಕೆ ಹೋಗಲಿಕ್ಕೆ ಹೇಳಿದೆನೆ ನಾನು? (ಪಡೆಯುವನೊಬ್ಬನೆ ತುಸು ತಡೆದು ಹೋಗುವನು)

**ಗುರುರಾಜ:—** (ಹೆದರಿಕೆಯಿಂದ) ಇಲ್ಲ-ಅಲ್ಲ-ಅಂದ್ರೆ-ಮುಖಕ್ಕ ಇನ್ನೂ ಬಣ್ಣ ಐತಿ ಅದಕ—

**ಗ್ರಂಥಕರ್ತ:—** (ಎರಡನೆಯ ಕುರ್ಚಿಯನ್ನು ನೋಡಿ ಕುಳಿತುಕೊಳ್ಳುತ್ತ) ಎಣ್ಣೀನೆ ಹತ್ತಿದ ಮ್ಯಾಲೆ ಬಣ್ಣದ ಹೆದರಿಕೆ ಯಾಕೆ?

**ಮಾಲಕ:—** (ಮೊದಲನೆಯ ಕುರ್ಚಿಯನ್ನು ಎಳೆದುಕೊಂಡು, ನೋಡಿ, ಹಂಗಿಸುವ ನಗೆಯಿಂದ ಗ್ರಂಥಕರ್ತನಿಗೆ) ನಂ ಪಾಲಿನ ಎಣ್ಣೆ ಕೂಡ ಸವರಿಕೊಂಡ್ಹಾಂಗ ಕಾಣ್ತದ (ಎನ್ನುತ್ತ ಕುಳಿತುಕೊಂಡು, ಕೂಡಲೆ ಅಧಿಕಾರದ ಚರ್ಯೆಯಿಂದ ಗುರುರಾಜನನ್ನು ಎದುರಿಸುತ್ತ) ಹಂ....ಏ. ಗುರೂ, ಈ ಎಣ್ಣೆ ಕುರ್ಚಿ ಮ್ಯಾಲೆ ಯಾಕೆ ಬಂದಿತು?....ಆಂ? ಹೇಳು.... (ದನಿಯನ್ನೇರಿಸುತ್ತ) ಮಾತಾಡಲ್ಲ?...ಈ ಕುರ್ಚಿ ಆದರೂ ಗ್ರೀನರೂಂದೊಳಗೆ ಯಾರು ಒಯ್ದರು?

**ಗುರುರಾಜ.—** (ಕಟವಾರಿ ಹುಡುಗನಂತೆ) ಯಾರೆಂದ್ರೀನ್ರಿ?..........ನಾವೇ ಒಯ್ದಿವ್ರಿ—

**ಮಾಲಕ:—**(ಸಿಟ್ಟಿನಿಂದ) ನೀವೆ! (ಗ್ರಂ. ನು ನಗಲು ಇನ್ನಷ್ಟು ಸಿಟ್ಟಿನಿಂದ) ಗ್ರೀನ್ ರೂಂದೊಳಗೆ ಕುರ್ಚಿ ಯಾಕೆ ಬೇಕಾಯ್ತು ನಿಮಗ?....ಯಾಕೆ ಬೇಕಾಯ್ತು—ಅಂತ ಕೇಳ್ತೀನಿ!

**ಗುರುರಾಜ**:— (ತಡೆಯುವೆ) ಯಾಕಂದ್ರೇನ್ರಿ ?....ಇಡಿಯ ನಾಟಕಾ ಮಾಡೋ ತನಕ ನಿಂತ್ಕಿಂತು ಕಾಲು ಸೆಟೆದು ಹೋದೂರಿ....(ಮಾಲಕನು ಸಿಟ್ಟಿನಿಂದ ನೋಡಲು) ನೀವ್ ಬೇಕಾದ್ದೇಳ್ರಿ....ಹೀಂಗ ಖಡಾ ನಿಂತು ಡ್ರಿಲ್ ಮಾಡೋ ನಾಟಕ—

**ಗ್ರಂಥಕರ್ತ** :— (ನಡುವೆಯೆ ತಡೆಯುವೆ) ನಿಂತುಕೊಂಡು ಅಂದರೇನೊ? ನಾಟಕಾ ಬರೆದವ ನಾನು ...ನನಗೊತ್ತಿದೆ ...ಎರಡನೆಯ ಅಂಕ ದೊಳಗೆ ನೀನು ಮಲಗಿಕೊಂಡು ಯಾಕೆ ಮಾತಾಡಲಿಲ್ಲ ?....ಅಶಕ್ತ ಹೆಣ್ಮಗಳು, ಕೂಸನ್ನು ಕಳೆದುಕೊಂಡು ಇನ್ನಿಷ್ಟು ನಿರ್ವಿಣ್ಣ ಆಗಿ ದ್ದಾಳೆ ಅಂತ ನಾನು ಸ್ಪಷ್ಟ ರಂಗಸೂಚನೆಯೊಳಗ ಬರೆದೀನಿ........ ಹಾಸಿಗೆಯ ಮೇಲೆ ಒರಗಿಕೊಂಡಿದ್ದಾಳೆ ಅಂತ ಕೂಡ ಬರೆದೀನಿ.... ಆವಾಗ ಸಹಿತ ನೀನು ಡಂಗುರ ಸಾರುವವರ ಹಾಂಗ ಸೆಟೆದು ನಡುವೆ ಬಂದು ನಿಂತು ಮಾತಾಡಿದಿ—

**ಗುರುರಾಜ** :— (ನಡುವೆಯೆ) ಮತ್ತೇನ್ಮಾಡಬೇಕ್ರಿ ? .... ನಾಟಕಾ ಆಡೋರ ಸುಕ ಬರೆದವ್ರಿಗೇನು ಗೊತ್ತು ?....ಮನಗಿಕೊಂಡು, ಮಿಳಿಮಿಳಿ ದನಿ ಯೊಳಗ ಮಾತಾಡಬೇಕಂತ!....ನಿಮಗೇನ್ ಗೊತ್ತೈತಿರಿ ಥೇಟರ ದಾಗ ನಾಟಕಾ ಆಡೋದು ?....ನಾ ಮನಗಿಕೊಂಡಿದ್ರ ಫರದೆ ಎದ್ದ ಕೂಡಲೆ ಇಡಿಯ ಥೇಟರ ತುಂಬಿ ಕುರ್ಚಿ ಕುಣಿದಾಡ್ತಿದ್ವು....ಒಬ್ರ ಹೆಗಲಮ್ಯಾಗ ಒಬ್ರು ಸರ್ಕಸ ಮಾಡ್ತಿದ್ರು....ನಾಯೇನ್ ಸುಳ್ಳ ಹೇಳ್ತೀನಿ ಅಂತ ತಿಳ್ದೀರೇನು ಹೀಂಗ ನನ್ನ ಕಣ್ಣ ಹಿಗ್ಗಿಸಿ ನೋಡ-ಲಾಕ ?....ಮನಗಿಕೊಂಡ್ರ ಒಬ್ರಿಗೆ ಕಾಣ್ತಿದ್ದಿಲ್ಲ ನಾ ಯಾರಂಬೋದು ....ಜಡ್ಡಾದವರ ದನಿಯೊಳಗ ಮಾತಾಡಿದ್ರಂತೂ ಮುಗಿದೇ ಹೋಗ್ತಿತ್ತು....'ಈ ಕಂಪನೀವಳಗ ಗಂಟಲ ಸುಧಾರಿಸಲಾಕ ಛಾ ಕೊಡೋದಿಲ್ಲೇನಪ' ಅಂತ ಕೇಕೆ ಹಾಕ್ತಿತ್ತು ತುಂಬಿ ಥೇಟರ....

**ಗ್ರಂಥಕರ್ತ** :— (ತಡೆಯದೆ ಪುಟಿದೆದ್ದು) ಏನೊ! ಏನು ಬುದ್ಧಿ ಕಲಿಸತಿಯಾ ನನಗೆ? ಸುಟ್ಟಿತು ನಿನ್ನ ಥೇಟರು, ನಿನ್ನ ಪಾರ್ಟಿ! ನಿಮ್ಮಂತಹರಿಗೆ ಅನುಕೂಲ ಆಗಲಿ ಅಂತ ನಾಟಕಾ ಬರೀತೀನೇ ನಾನು? ಜಗತ್ತಿ ನೊಳಗೆ ಯಾರಿಗೆ ಜಡ್ಡೇ ಆಗ್ಬಾರದಂತೀಯಾ ?

**ಗುರುರಾಜ**:— (ತಿರಸ್ಕಾರದಿಂದ) ಆಗಲೆಲ್ಲರಿ ಹೆಂಡಿರ್ಮಕ್ಕಳ ಮುಂದ.... ಆದ್ರ ರೊಕ್ಕ ಕೊಟ್ಟವ್ರ ಮುಂದ—

**ಗ್ರಂಥಕರ್ತ**:— (ನಡುವೆಯೆ) ಸಾಕು ನಿನ್ನ ರೊಕ್ಕ ಕೊಟ್ಟವ್ರು! ರೊಕ್ಕದ ಸಲು-ವಾಗಿ ಪಾರ್ಟ ಮಾಡೋ ನಿಮ್ಮಂತಹರಿಗೆ ನಾಟಕ ಕಲೆ ಅಂಬೋದು-

**ಮಾಲಕ**:— (ಕೆಣಕುವ ನಗೆಯಿಂದ) ಹೊಟ್ಟೆಗಾಗಿ ನಾಟಕಾ ಬರೀತೀರಿ ಅಂತ ನೀವೇ ಹೇಳಲಿಲ್ಲ?....ಅಲ್ಲಲ್ಲ....ನನ್ನ ಮಾತು ಕೇಳಿರಿ....ಅವನ ಮೇಲೆ ಸಿಟ್ಟಿಗೆದ್ದರೇನು?....

**ಗ್ರಂಥಕರ್ತ**:— (ಬುಸುಗುಟ್ಟುತ್ತ) ನನಗ ಬಂದಾನೆ ಬುದ್ಧಿಯ ಹೇಳಲಿಕ್ಕೆ? (ಮಾಲಕನನ್ನು ಎದುರಿಸುತ್ತ) ನಿಮಗ ನಾನು ಮುಂಚೆಯೆ ಹೇಳಲಿಲ್ಲ? ನಾಟಕಕ್ಕೆ ತಕ್ಕಂತೆ ರಂಗಭೂಮಿಯ ಮೇಲೆ ಸಜ್ಜುಗೊಳಿಸಲಿಕ್ಕೆ ಹೇಳಿದ್ದಿಲ್ಲ? ಮಲಗೋದಂದ್ರೆ ನೆಲದ ಮ್ಯಾಲೆ ಯಾಕೆ ಬೀಳ್ಬೇಕು? ಮನೆ ಅಂದ ಮಾತಿಗೆ ಮಂಚ ಇರಬಹುದಾಗಿದೆ....ಕೂಡಲಿಕ್ಕೆ ಕುರ್ಚಿನೇ ಯಾಕೆ ಬೇಕು? ಒಂದು ಕಡೆ ಹಾಸಿಗೆ ಸುರುಳಿ ಇರಬಹುದು; ಒಂದು ಕಡೆ ಧಾನ್ಯದ ಚೀಲ ಇರಬಹುದು; ಮನೆಗೆ ತಕ್ಕಂತೆ ಸೀನ್ ಮಾಡಿಕೊಂಡ್ರ—

**ಮಾಲಕ**:— ಮಹಾಸ್ವಾಮೀ—ಹಾಸಿಗೆ ಸುರುಳಿ, ಧಾನ್ಯದ ಚೀಲ, ಡಬ್ಬಿ ಹಾಕಿದ ಹಂಡೆ, ಅಂಬೆಗಾಲು ಹಾಕುವ ಅಜ್ಜ—ಇಂಥಾವೆಲ್ಲ ತರೋದು ಶಕ್ಯ ಇದ್ರೆ ನಾನು ಸಂಸಾರ್ನೆ ಮಾಡ್ಕೊಂಡಿರ್ತಿದ್ದೆ, ಈ ಹಾಳು ಕಂಪನಿಯೊಳಗೆ ಇಂಥಾ ಕಪಿಗಳನ್ನ ಕಟ್ಟಿಕೊಂಡು ಕುಣಿದಾಡೋದಕಿಂತ—

**ಗುರುರಾಜ**:— (ತಿರಸ್ಕಾರದಿಂದ) ಇವರು ಬರೆದ್ಹಾಂಗೇ ಹಲ್ಲು ಕಿರಿದು ಕಪಿ ಆಗೋದು ಯಾರಿಗೆ ಬೇಕಾಗೇತಿ? (ಎಂದು ಅಭಿಮಾನದಿಂದ ತಲೆ ಜಾಡಿಸುವನು. ಆಗ ಅವನು ಉದ್ದಗೂದಲು ಬೆನ್ನುಮೇಲೆ ಹಾರುವುದನ್ನು ಮಾಲಕನು ಆಶ್ಚರ್ಯದಿಂದ ನೋಡಿ, ಹೊರಟ ಅವನನ್ನು ತಡೆಯುವ ದನಿಯಲ್ಲಿ)

**ಮಾಲಕ**:— ಏ—(ಗು. ನು ತಡೆಯುವನು) ಕಪಿ ಆಗು, ಕಂಪನಿ ಬಿಡು—ನನಗ ಎರಡೂ ಅಷ್ಟೆ....ಆದರೆ ಹೋಗೋ ಮುಂಚೆ ಆ ವಿಗ್—ಆ ಟೋಪಣ ಬಿಚ್ಚಿಟ್ಟು ಹೋಗು.

**ಗುರುರಾಜ**:— (ಕೂದಲನ್ನು ಕೈಯಿಂದ ಸವರುತ್ತ) **ಟೋಪನ್? ಯಾವ್ದು?**

**ಮಾಲಕ**:— (ಸಿಟ್ಟಿನಿಂದ) ಯಾವ್ದು? ಟೋಪಣ ಹಾಕೋ ಮಟ್ಟಿಗಾದರೂ ನಿನಗೆ ತಲೆ ಇರ್ಬೇಕು ಅಂತ ತಿಳಿದಿದ್ದೆ... ನಿನ್ನ ತಲೆಯ ಮ್ಯಾಲೆ ಇದ್ದದ್ದು ಏನದು?

**ಗುರುರಾಜ**:— ಕೂದಲು!

**ಮಾಲಕ**:— ಆ ಕೂದಲಿಗೆ ಟೋಪಣ ಅಂತಾರೆ.

**ಗುರುರಾಜ**:— ಮನಸ್ಯಾರ ಕೂದಲಿಗೂ ಟೋಪಣ ಅಂತಾರ್ರಿ?

**ಮಾಲಕ**:— (ತಿಳಿಯದೆ) ಅಂದ್ರೆ?

**ಗುರುರಾಜ**:— ಅಂದ್ರ-ನನ್ನೂರಿ ಈ ಕೂದಲು! ಸ್ವಂತ ನನ್ನೂವೇರಿ? (ಎಳೆದು) ಇದು ನೋಡಿದಿರಾ? ನನ್ನ ತಲೆಯೊಳಗಿಂದೇ ಬೆಳೆದದ್ದು....

**ಮಾಲಕ**:— ಹುಂ—ಹೋಗು–ಬುದ್ಧಿವಂತ! ಏನಿಲ್ಲಂದ್ರೆ ಕೂದಲಾದ್ರೂ ಬೆಳೀತಾವ ನಿನ್ನ ತಲೆಯೊಳಗೆ!

**ಗುರುರಾಜ**:— (ಹೊರಡುತ್ತ) ಕಂಪನೀವಳಗ ನಂನಮ್ಮ ಕೂದಲಾ ಕೂಡ ನಾವು ಗಳಿಸಬಾರ್ದು ಅಂದ್ರ—(ವೈಭವದಿಂದ ತಲೆ ಜಾಡಿಸಿ) ಯಾರಿಗ್ಬೇಕು ಇಂಥಾ ನಾಟಕದ ಕಂಪನಿ? (ಹೋಗುವನು)

[ಮಾಲಕನೂ ಗ್ರಂಥಕರ್ತನೂ ಒಂದೇ ಹೇಳಿಗೆ ಒಬ್ಬರನ್ನೊಬ್ಬರು ನೋಡಿ, ಒಮ್ಮೆಲೆ ಕಣ್ಣು ತಪ್ಪಿಸಿ, ಕೆಲಹೊತ್ತು ಸುಮ್ಮನಿರುವರು. ಮಾಲಕನು ಬೆನ್ನಿಗೆ ಕೈ ಕಟ್ಟಿಕೊಂಡು ಅತ್ತಿತ್ತ ತಿರುಗಾಡುವನು. ಗ್ರಂಥಕರ್ತನು ಸಿಟ್ಟಿನಿಂದ ಕುರ್ಚಿಯ ಮೇಲೆ ಕುಕ್ಕರಿಸಿ ಬೆವರೊರೆಸಿಕೊಳ್ಳುವನು. ಮಾಲಕನು ಮಾತನಾಡದ್ದನ್ನು ಕಂಡು ತುಸು ಕನಲಿ—]

**ಗ್ರಂಥಕರ್ತ**:— (ಹುಬ್ಬುಗಂಟಿಕ್ಕಿ) ನನಗೇನನ್ನೋದು ಹೇಳಿಬಿಡ್ರಿ.

**ಮಾಲಕ**:— (ತಡೆದು ಅವನನ್ನು ದಿಟ್ಟಿಸುತ್ತ) ಏನಂದಿರಿ?

**ಗ್ರಂಥಕರ್ತ**:— (ಸಿಟ್ಟಿನ ದನಿಯಲ್ಲಿ) ನೀವೇ ಏನಂತೀರಿ ಅಂತ ನಾನೇ ಕೇಳತೀನಿ

**ಮಾಲಕ**:— (ಇನ್ನೂ ತಿಳಿಯದೆ) ಯಾವುದಕ್ಕೆ? ಅನ್ನೋದೇನು?

**ಗ್ರಂಥಕರ್ತ**:— (ಸಿಟ್ಟು ತಡೆಯದೆ) ಯಾವುದಕ್ಕೆ? ಅಂದ್ರ ನನ್ನ ನಾಟಕಕ್ಕೆ.... ಅಂದ್ರೆ—ನಾಟಕ ಮಾಡೋದೋ ಏನ ಬಿಟ್ಟು ಬಿಡೋದೊ?

**ಮಾಲಕ** :— ನಾಟಕ ಮಾಡೋದೊ ಬಿಡೋದೊ ಅಂದ್ರೆ ? ಕಂಪನೀನೇ ಕಟ್ಟಿಕೊಂಡೀನಿ ಕೊರಳೊಳಗೆ ಮತ್ತ—

**ಗ್ರಂಥಕರ್ತ** :— (ನಡುವೆಯೆ) ಅದಲ್ಲ—ನನ್ನ ನಾಟಕದ ವಿಷಯ-ನಾನು ಕೇಳ್ತೀನಿ.

**ಮಾಲಕ** :— ಓಹೊ! ನಿಮ್ಮ ನಾಟಕ ?

(ಒಳಗೆ ಒಮ್ಮಿಂದೊಮ್ಮೆಲೆ ಕಾಜು ಒಡೆದ ಸದ್ದಾಗಲು ತಡೆಯುವನು. ಲಕ್ಷ್ಯಗೊಟ್ಟು ಕೇಳಬೇಕೆನುವಾಗ ಮತ್ತೊಮ್ಮೆ ಅವೇ ಸದ್ದು ಕೇಳಬರುವುದು

**ಮಾಲಕ** :— (ಅಧಿಕಾರದಿಂದ) ಏ—ಯಾರದು ? ಏನದು ಒಡೆದದ್ದು ? ಏ — (ಎನುವಷ್ಟರಲ್ಲಿ ಅರ್ಧಮರ್ಧ ಬಣ್ಣ ಒರೆಸಿಕೊಂಡ, ಒಳಂಗಿಯನ್ನೂ ಲುಂಗಿಯನ್ನೂ ತೊಟ್ಟುಕೊಂಡ ಗುರುರಾಜನು ಧಾವಿಸಿ ಬರುವನು. ಅವನ ಕೈಯಲ್ಲಿ ನಿರಿಗೆ ಹಾಕಿದ ಸೀರೆಯೊಂದಿದೆ)

**ಗುರುರಾಜ** :— (ಹೆದರಿಕೆಯಿಂದಲೂ ಕಳವಳದಿಂದಲೂ) ನಾ—ಈ ಸೀರೆ—ಅಂ-ಆಗ —ನಿಂಗ—ಆ ನಗೀ ನಿಂಗರಿ—ದೊಡ್ಡ ಕನ್ನಡಿರಿ—

**ಮಾಲಕ**:— (ಗದ್ದರಿಸುತ್ತ) ಏನದು-ಬೊಗಳೊ! ಯಾರು ? ನಿಂಗ-ನ ? ಏ-ನಿಂಗ್ಯಾ—ನಿ—ನಿ—ನಿಂಗ್ಯಾ—ಇಲ್ಲಿ— (ಎನ್ನುತ್ತ ಒಳಗೆ ಹೊರಡುವಷ್ಟರಲ್ಲಿ ನಿಂಗನೆ ಬರುವನು) [ಚೂಪಾದ ಮೀಸೆ, ಹೆಗಲಮೇಲೆ ಕೋಟು, ಚುಂಗ ಬಿಟ್ಟು ಉಟ್ಟ ಧೋತರ, ಬಲಗೈಯಲ್ಲಿ ಪಾದರಕ್ಷೆಗಳು, ತಲೆಗೂದಲಿಗೆ ಇನ್ನೂ ಅಲ್ಲಲ್ಲಿ ಬಿಳಿ ಪೌಡರ ಉಳಿದಿದೆ, ನಗೆಯನ್ನು ಸೂಚಿಸಲು, ಮೂಗಿನಿಂದ ಬಾಯಿಯ ಎರಡೂ ತುದಿಗೆ ಕೊರೆದ ಕಪ್ಪು ಗೆರೆಗಳು—ಇದು ನಿಂಗನ ಸವಾರಿ.]

**ನಿಂಗ** :— (ವಿನಯವನ್ನು ನಟಿಸುತ್ತ) ಹಾಜರ....ಕೈ ಮುಗೀತೀನಿ—(ಕೈಯೊಳಗಿನ ಪಾದರಕ್ಷೆಗಳನ್ನು ಕಂಡಂತೆ ಮಾಡಿ) ಅಲ್ಲ—ಕಾಲು ಮುಗೀತೀನಿ,—

**ಮಾಲಕ** :—(ಅಧಿಕಾರ ದನಿಯಲ್ಲಿ) ಸಾಕ್ಮಾಡೊ ನಿನ್ನ ಉದ್ಧಟತನ! ಒಳಗೆ ಏನಾಯ್ತು ?

**ಗುರುರಾಜ**:— ಕೇಳಿರಿ ಅವನಿಗೆ ಕನ್ನಡಿ ಯಾರು —

**ಮಾಲಕ**:— ಸುಮ್ಮನಾಗೊ ನೀನು !

**ನಿಂಗ** :— (ನಾಟಕೀಯ ದನಿಯಲ್ಲಿ) ಸುಮ್ಮಾಕಿರೊ ನೀನು! ಹೋಗುವಳಗ ಸೀರೆ ಸುತ್ತುಗೋಳಾಕ!

ಮಾಲಕ :— ಏ ! ಒಳಗೆ ಏನದು ಗದ್ದಲ ?
ನಿಂಗ:— ಕನ್ನಡಿ ಒಡೀತರಿ— ಹಹ !
ಮಾಲಕ.— ( ಗಾಬರಿಯಿಂದ ) ಏನು ? ಕನ್ನಡಿ ? ಯಾವುದು ? ಆ ದೊಡ್ಡದ ? ಗ್ರೀನ್ ರೂಂನೊಳಗಿಂದ ? ಯಾರು ಒಡೆದರು ? (ಸಿಟ್ಟಿನಿಂದ ದನಿ ಏರುತ್ತ) ಯಾರು ಒಡೆದರು ಹೇಳು—ಅವರ—ಜೀವ—
ನಿಂಗ:— (ಸಮಾಧಾನದ ದನಿಯಲ್ಲಿ) ಮಾಸ್ತರ, ತುಸು ತಡೀರಿ.... ನಾ ಹೇಳಾಕೆ ಬಂದೀನಿ ... ಆ ಕನ್ನಡಿ ಒಡೀತ್ರಿ....ಯಾರೂ ಒಡೀಲಿಲ್ಲರಿ.... ತಂತಾನೇ—
ಮಾಲಕ:— ಏನು ?
ನಿಂಗ:-- (ಗ್ರಂಥಕರ್ತನನ್ನು ತೋರಿಸುತ್ತ) ಅವರೀಗ ಗೊತ್ತಿರಬೇಕು ಕೇಳಿರಿ—
ಗ್ರಂಥಕರ್ತ:— (ಮಾಲಕನು ಚಕಿತನಾಗಿ ತನ್ನನ್ನು ನೋಡಲು) ಹುಂಬ! ಅವಿವೇಕಿ! ನನಗೂ ಆ ಕನ್ನಡಿಗೂ ಸಂಬಂಧ ಏನು? ಗ್ರೀನ್ ರೂಂ ಅಂದ್ರ ಎಂತಹದಿರತದ ನೋಡಿಲ್ಲ ನಾನು—
ನಿಂಗ :— (ನಡುವೆಯೆ ಚಪ್ಪಾಳೆ ತಟ್ಟಿ) ಹಾಂ—ಹಾಂ....ಕಡೆಗೂ ಹೇಳಿದಿರಿ ನೋಡ್ರಿ ಕರೇವ ಮಾತು!....ಗ್ರೀನ್ ರೂಂ ಗೊತ್ತಿಲ್ದೋರು ನಾಟಕಾ ಬರೆದ್ರಲ್ಲಾ ಅಂತ ಸಿಟ್ಟಲೆ ಸಿಡಿದು ಚೂರಾತು ನೋಡ್ರಿ—
ಮಾಲಕ :— ಏ ಮೂರ್ಖಾ ! ತಡೆ ನಿನ್ನ ಮಂಗಬುದ್ಧೀನ್ನ....ನೀ ಒಡೆದೆ ಯೇನು ಕನ್ನಡಿ—
ಗುರುರಾಜ :— ಅವನೇ ಒಡೆದನ್ರಿ....ಕೊಬ್ರಿ ಎಣ್ಣೆ ಬಾಟ್ಲೆ ಎತ್ತಿ ಗುರಿ ಹಿಡಿದು ಒಗಿದನ್ರಿ ಕನ್ನಡಿಗೆ—
ನಿಂಗ:— ಬಾಟ್ಲೆ ? ಯಾವ ಕೈಯ್ಯಾಗ ಹಿಡಿದಿದ್ನಿ ಹೇಳ್ನೋಡು
ಗುರುರಾಜ :— ಎಡಗೈಯ್ಯಾಗ.
ನಿಂಗ:— (ನಗುತ್ತ) ಛಿ-ಹೋಗೊ ನಿನ! ಎಡಗೈಲೆ ಅಟೊಂದು ನೇಟಾಗಿ ಒಗೀಲಾಕ ಬರತೈತಿಯೆ? ಹಹ! ಕನ್ನಡಿವಳಗ ನೋಡಿದಿ ಕಾಣ್ತೈತಿ... ಬಲಗೈ ಎಡಗೈಹಾಂಗ ಕಾಣ್ತು....(ಮಾಲಕನಿಗೆ) ಸುಳ್ಳು ಹೇಳ್ತಾನ್ರಿ, ಮಾಸ್ತರ....ನನ್ನ ಬಲಗೈಯಾಗ ಇತ್ತರಿ ಬಾಟ್ಲೆ....
ಗ್ರಂಥಕರ್ತ:— ಅಂತೂ ಬಾಟ್ಲೆ ಇತ್ತು ನಿನ್ನ ಕೈಯಾಗ ಅಂತ—

ನಿಂಗ:— ಎಲೆ ನಿಮ ! ವಕೀಲೀ ಬ್ಯಾರೇ ಸಾಧಿಸ್ಬೇಕಂತೀರೇನು ? ಬಾಟ್ಲಿ ಇಲ್ಲ ಅಂತ ಯಾರು ಅಂದ್ರು....ಹಾಂಗ ಕೇಳಿದ್ರ ಕನ್ನಡೀ ಒಡೆದವ ನಾನೇ ಅಂತ—

ಮಾಲಕ :— (ಸಿಟ್ಟು ತಡೆಯದೆ) ನೀನು! ನೀ ಒಡೆದೆಯಾ ? ಬೇಕಂತೇ ಒಡೆದೆಯಾ ? ಆ ಕನ್ನಡಿ—ಆ ಕನ್ನಡಿ—

ನಿಂಗ :— (ನಡುವೆಯೆ) ನನಗ್ಗೊತ್ತೈತಿರಿ ಆ ಕನಡಿ ವ್ಯಾಗ ನಿಮ್ದು ಮನಸ್ಸು ಅಂತ....ಊರೂರಿಗೆ ಫರದೆ ಜಪ್ತ ಮಾಡಿದರೂ ಆ ಕನಡಿ ಮುಚ್ಚಿಡತಿದ್ದಿರಿ—ನನಗ್ಗೊತ್ತಿಲ್ಲ ?

ಮಾಲಕ :— (ಸಿಟ್ಟಿನ ಆವೇಗ ಇಳಿಯುತ್ತ) ಆ ಕನ್ನಡಿಯ ಕಿಮ್ಮತ್ತು ನೀನೇ ಕೊಡಬೇಕ್—

ನಿಂಗ:— (ನಡುವೆಯೆ) ಹಾಂ—ಹೀಂಗ ಹೇಳ್ರಿಲ....ನಾ ಕೊಡಾಕ ಒಲ್ಲೆ ಅಂತೀನೆ ?....ನಂ ಪಗಾರ ಬಾಕಿಯೊಳಗೆ ಅದನ್ನ ವಜಾಮಾಡಿರಿ—ಉಳಿದದ್ದು ಇಲ್ಲಿ ನಿಂತಮಟ್ಟಿಗೆ ವ್ಯಾಗ ಕೊಡ್ರಿ....ಗಾಡೀ ಖರ್ಚಿಗೆ ಹರಕತ್ತು ಆಗೇತಿ....

ಮಾಲಕ :— (ಆಶ್ಚರ್ಯದಿಂದ) ಗಾಡಿಯ ಖರ್ಚು....!!

ಗುರುರಾಜ : – ಕಂಪನಿ ಬಿಡತಾನಂತರಿ—

ಮಾಲಕ :— ನೀ ಸುಮ್ಮನಾಗೊ !

ನಿಂಗ :— (ಗು. ನಿಗೆ) ಹೆಣ್ಣ ಪಾರ್ಟು ಮಾಡಿ ಮಾಡಿ ಹೆಂಗಸಿನ ಹಾಂಗ ನಡಾಕ ಬಾಯಿ ಹಾಕೋ ಚಟಾನೇ ಬಿದ್ದೇತಿ ... (ಗ್ರಂಥಕರ್ತನಿಗೆ) ತಮ್ಮ ಪರಭಾವದಿಂದ ಈ ಬಡಮುಂಡೇದ್ದಕ್ಕ ಕಂಪನಿ ಬಿಡೋ ಚಲೋ ಬುದ್ದಿ ಬಂತರಿ....ತಂ ಪಾದಕ್ಕ—

ಗ್ರಂಥಕರ್ತ :— (ತಿರಸ್ಕಾರದಿಂದ) ಮೂರ್ಖ ! ಕಾಲೊಳಗಿನ ಚಪ್ಪಲಿ ಕೈಯೊಳಗೆ ಹಿಡಿಯೋದಂದ್ರ ದೊಡ್ಡ ವಿನೋದ ಅಂತ ತಿಳಿದೀಯೋನು ?

ನಿಂಗ :— ತಮ್ಮ ನಾಟಕದಿಂದ ಕಾಲ ಬದಲಾಗೇದಂತ ಯಾರೋ ಲೆಕ್ಚರ ಕೊಡಲಿಲ್ರಿ ?....ಅದಕ ಜಾಗ ಬದಲಾಯಿಸಿ ವ್ಯಾಗ ಯಾಕ ಬಂದಿರ್‍ಬಾರ್ದು ಕಾಲು ಅಂತ ಯಿಚಾರಾ ಹಾಕಿ—

**ಗುರುರಾಜ**:— (ಅಸೂಯೆಯಿಂದ) ಆಹ! ನಗಿಸೋ ಪಾರ್ಟ ಮಾಡಿ ಹುಚ್ಚಂಗ ತನಾನೇ ಚಟಾ ಆಗೇದೋ ಏನೊ ?

**ನಿಂಗ**;— ಏ -ಗುರೂ—ನಂ ತೆಕ್ಕೆ ಬ್ಯಾಡ ಅಂದೆ....ನಗಿಸೋ ಪಾರ್ಟ ಅಂದ್ರ ಹಾಂಗ್ಹಿಂಗ ಮಾಡಿದಾಂವ ಅಲ್ಲ ನಾ....ಪಾರ್ಟ ಮಾಡಿ ಮಾಡಿ ಮುಂದಿದ್ದ ಅಪ್ಪನ ಹೆಸರು ಹಾರಿ ನಗೆಯ ನಿಂಗಪ್ಪ ಅಂತ ಸೊಂತ ಹೆಸರ ಗಳಿಸೀನಿ....ಪುಕಟ ಕಂಡೂವೇನು ಈ ಹುರಿಮೀಸೆ- (ಎಂದು ಎಳೆಯಲು ಮೀಸೆ ಕೈಯೊಳಗೆ ಬರುವುದು. ಮಾಲಕನು ನಗು- ವನು. ಗುರುರಾಜನ ಅಸೂಯೆ ಹೆಚ್ಚುವುದು.) ನೋಡಿದ್ಯಾ — ಮನಗಿ- ದಾಗ ಸಹಿತ ಮೀಸೆಗೆ ಹುರಿ ಹಾಕಲಾಕ ಬರ್‍ತೈತಿ....

**ಗುರುರಾಜ**: - ಮುಂಚೆ ಆ ಕನ್ನಡಿ ಕಿಮ್ಮತ್ತು ಕೊಡು....

**ನಿಂಗ**:— (ಆಶ್ಚರ್ಯದಿಂದ) ಎಲೆ ! ನಿನಗ ಯಾಕ ಕೆಟ್ಟ ಅಸಿಸೇತಿ ಕನಡಿ ಒಡೆದರ ? ಸೀರೆ ಸುತ್ತಿಗೊಂಡು ಅಂಥಾ ಮುಕ ನೋಡೋದು ತಪ್ಪಿತು ಅಂತ ಕುಶಿ ಆಗ್ಬೇಕು ನಿನಗೆ—

**ಮಾಲಕ** :— (ಅಧಿಕಾರದಿಂದ) ಇದೆಲ್ಲ ಹರಟೆ ಬ್ಯಾಡ ನನಗೆ....ಕನ್ನಡಿ ಯಾಕ ಒಡೆದೆ ಅದನ್ನ ಹೇಳು ಮುಂಚೆ (ಕುರ್ಚಿಯ ಮೇಲೆ ಕೂತು ಅವನನ್ನು ದಿಟ್ಟಿಸುವನು)

**ಗ್ರಂಥಕರ್ತ**:— ನನ್ನದೇನು ಸಂಬಂಧ ಅದನ್ನ ಸ್ಪಷ್ಟ ಮಾಡು....ಇಲ್ಲಾ ಅಂದ್ರೆ—

**ನಿಂಗ**:— (ಕೈಯಿಂದ ತಡೆಯುತ್ತ) ಒಂದು ಯಾಳೀಗೆ ಒಬ್ರು.... ಮಾಲಕನಿಗೆ) ಕನ್ನಡಿ ಯಾಕ ಒಡಿದ್ನಿ ಅಂತೀರಿ, ಮಾಸ್ತರ ?....ಇದ್ಯಾತ ಹೇಳ್ತೀನ್ರಿ. ಇಂಥಾ ನಾಟಕದಾಗ ಪಾರ್ಟ ಮಾಡಿದ ಮ್ಯಾಗ ಮುಕ ನೋಡೋದು ಬ್ಯಾಡ ಅಂತ ಒಳಗ ಹೋದಿನ್ರಿ—ಧುತ್ ಅಂತ ಇದಿರೇ ಕನ್ನಡಿ.... 'ಬ್ಯಾಡ ಅಂದ್ರೂ ಮುಕಾ ತೋರಿಸ್ತೈತಿ ಈ ಮಂಗ್ಯಾನ ಕುಲದು ಅಂತ—'

**ಗ್ರಂಥಕರ್ತ**:— (ಸಿಟ್ಟು ತಡೆಯುತ್ತ) ಇಂಥಾ ನಾಟಕ!

**ನಿಂಗ :**— (ಕೈಸನ್ನೆಯಿಂದ ತಡೆಯುತ್ತ) ನಿಂ ಪಾಳಿ ಬಂದಾಗ ಹೇಳ್ತೀನ್ರಿ ನಿಮ್ದೂ ಎಲ್ಲಾ ಹಕೀಕತ್ತು....(ಮಾಲಕನಿಗೆ)—'ಮಂಗ್ಯಾನ ಕುಲದ್ದು' ಅಂತ ಕೆಂಡಾದಿನ್ರಿ ಕನ್ನಡಿಮ್ಯಾಗ....ಅಟರಾಗ ಈ ಗುರೂ ಬಂದನ್ರಿ....

**ಗುರುರಾಜ :**— ನಾಯೇನೂ ಮಾಡಿಲ್ಲ, ಸುಳ್ಳು—

**ನಿಂಗ :**— ಎಲ ! ಹೆಂಗ್ಸೋರ ಬುದ್ದಿ ಮೊಳಕಾಲ ಕೆಳಾಕ ಅಂದ್ರ ಹೆಣ ಪಾರ್ಟ ಮಾಡೋರ ಬುದ್ದಿ ಅದಕೂ ಕೆಳಾಕ—ಅಂದ್ರ ಮಣ್ಣ ಒಳಾಕೆ ಏನೂ ಅಂತೀನಿ....'ಗುರೂ ಬಂದನ್ರಿ' ಅಂದ್ರ ಅವನ ಮಕ ಕಾಣ್ತಾ‌ಃ ಅಂತ....ಮೀಸೆ ಬೋಳಿಸಿದ್ದಕ ಗಂಡಸ ಅಲ್ಲ, ಸೀರೆ ಉಟ್ಟಗೂ ಹೆಣ್ಣಲ್ಲ—ಇದೇನ ಅಪಸಕೂಣ ಮಕ ಅಂತ ತೆಲಿ ಮತ್ತೀಟ ತಿರಿಗಿ ಧಾಂಗ ಆಗಿ—

**ಗ್ರಂಥಕರ್ತ :**— (ನಡುವೆಯೆ) ಯಾರ ತಪ್ಪು ಅದು ? (ಮಾಲಕನನ್ನು ತೋರಿಸುತ್ತ) ಕೇಳು ಇವರಿಗೆ, ನಾನು ಮುಂಚಿನಿಂದ ಹೇಳತಾ ಇದ್ದೀನಿ, ನಂ ನಾಟಕ ಅಂದ್ರ ಹೊಸ ನಾಟಕ, ಇದ್ದದ್ದ ಇದ್ಧಾಂಗ ತೋರಿಸೋ ನಾಟಕ, ಅದರೊಳಗ ಹೆಣ್ಣ ಪಾರ್ಟ ಹೆಂಗಸರೇ ಮಾಡಬೇಕು ಅಂತ—

**ಗುರುರಾಜ :**— (ತಿರಸ್ಕಾರದಿಂದ) ಇನ್ನೂ ನಾಟಕಾ ನೋಡಲಾಕ ಬರಲಾರದ ಹೆಣ್ಣು ಮಾಡಲಾಕ ಏನ್ಬಂದೀತ್ರಿ ?

**ಮಾಲಕ :**— (ಅನುಭವದ ಹಿರಿತನದಿಂದ) ಮಹಾಸ್ವಾಮೀ, ಗಂಡಸರನ್ನ ಕಟ್ಟಿಕೊಂಡು ಸಿವ್ಹಿಲ್ ಜೇಲಿಗೆ ಹೋಗೋದು ಸಾಕಾಗಿಲ್ಲೇನು ? ಕಂಪನಿಯೊಳಗ ಹೆಂಗಸರನ್ನ ಸೇರಿಸಿ ಕ್ರಿಮಿನಲ್ ಕೋರ್ಟಿಗೆ ಕಳುಹಿಸಬೇಕಂತೀರೇನು ನನ್ನ ?

**ಗ್ರಂಥಕರ್ತ :**— (ಮಾತು ಮುಗಿಸುವವರಂತೆ ಎದ್ದು) ಹುಚ್ಚುತನ! ಸುಸಂಸ್ಕೃತ ಹೆಣ್ಮಕ್ಕಳು, ಸುಶಿಕ್ಷಿತ ಹೆಣ್ಮಕ್ಕಳು ಕಲಾಭಿಮಾನದಿಂದ ಬೇಕಾದಷ್ಟು ಜನ ಪಾರ್ಟ ಮಾಡಬಹುದು.

**ಗುರುರಾಜ :**— (ಅಸೂಯೆಯಿಂದ) ನಮ್ಮಂತಹ ಬಡವರ ಹೊಟ್ಟಿ ಮ್ಯಾಲ ಕಾಲು ಕೊಡಬಹುದು. ನಿಂ ಹೊಸ ನಾಟಕಾನೂ ಬ್ಯಾಡ, ಹೆಣ್ಮಕ್ಕಳು ನಂ ಹೊಟ್ಟಿ ಮ್ಯಾಗ ಕಾಲ ಕೊಡೋದೂ ಬ್ಯಾಡ....ದೇಶಾದ ತುಂಬಿ ಸಿನೀಮಾ ನಡೆದಾವ— ಹೋಗಿ ಬಿಡ್ತೀವಿ ಸಿನಿಮಾ ಕಂಪನೀಗ—

**ನಿಂಗ**:— (ನಗುತ್ತ )**ಸಿನೀಮಾದಾಗ ? ಅಲ್ಲೇನು** ಹೆಂಗ್ಸೋರ ಕಾಟ ಕಡಿಮೆ ಐತಿ ತಿಳಿದೀಯೋನೋ ? ಮುಖ ಎಂತಾದಿದ್ದರೂ ಚಂದ ಕಾಣೋ ಹಾಂಗ ಫೋಟೊ (Photo) ಇರ್ತೇತಿ ಅಲ್ಲಿ—ಬೇಕಾದ ಹೆಂಗಸ ಇದ್ದರ ನಡೀತೇತಿ....(ನಗೆಯಿಂದ) ನಿನ್ನಂತಾ ಹಸುರ ತುಟಿ ಗಂಡಹೆಣ್ಣಿನ್ನ—

**ಗುರುರಾಜ** :— (ಹೆಂಗಸಿನಂತೆ ಮೂಗು ಮುರಿಯುತ್ತ) ಶರೀಯ ನಿನ! ನನಗೇನು ಗಂಡಪಾರ್ಟ ಮಾಡಾಕ ಬರೋದಿಲ್ಲಾಂತ—

**ನಿಂಗ** :— (ಅಭಿಮಾನದಿಂದ) ಆದ್ರ ಮಾತ ಎಲ್ಲಿ ಬರ್ತೇತಿ ನಿನಗ ?.... ಅದೇ ನಮ್ಮಂಥೋರು ಹೋದ್ರ ಕೈಮುಗಿದು ಕರೀತಾರ ಕಂಪನೀಗೆ.... ಬೇಕಾದಾಂಗ ಫೋಟೊ ಇರ್ತೇತಿ....ಮಾತ ಬ್ಯಾಡ, ಕತೀ ಬ್ಯಾಡ.... ಬರೇ ಮುಕಾ ಮಾಡಿಯೆ ( ಮುಖವನ್ನು ಚಿತ್ರವಿಚಿತ್ರವಾಗಿ ಕೆಡಿಸುತ್ತ ) ಹೀಂಗ—ನಗಿಸಿ ಬಿಡ್ತೀನಿ....

**ಗ್ರಂಥಕರ್ತ**:— (ಉಸಿರೆಳೆದು) ಹುಂ—ನನ್ನದೇ ದುರ್ದೈವ....

**ನಿಂಗ** :— (ಅಣಕಿನಿಂದ) ನಾವು ಹೋದ್ರ ನಿಮಗ ಆಟೊಂದು ಕಸವಿಸಿ ಆಗ್ತೇತಲ್ಲ ? ಕರೇವು... ನಮುಂಥಾ ಹುಚ್ಗೊಟ್ಟಿಗಳ್ನ ಬಿಟ್ಟು ಮತ್ತ ಯಾರು ಪಾರ್ಟ ಮಾಡ್ಬೇಕು ನಿಂ ನಾಟಕದಾಗ....

**ಮಾಲಕ**:— (ಸಮಾಧಾನದ ದನಿಯಲ್ಲಿ) ಏ ನಿಂಗಾ, ಇಲ್ಲಿ ನೋಡು ಗುರುರಾಜಾ, ಹುಚ್ಚನ ಹಾಂಗ ಮಾತಾಡ್ಬೇಡ್ರಿ....ಸಿನೀಮಾ ಸೇರೋದಾದ್ರ ಕಂಪನಿ ಯಾಕ ಬಿಡ್ಬೇಕು ? ಅಲ್ಲ—ಇಷ್ಟು ದಿವಸ—ಇಷ್ಟು ವರ್ಷ—ಒಂದೇ ಮನೆತನದ್ಹಾಂಗ ನಡೆಸಿದ್ವಿ ಕಂಪನಿ....ಈಗ ಯಾಕ ಮುರೀಬೇಕು ಹೇಳು....

**ನಿಂಗ** :—<br>**ಗುರುರಾಜ** :— } ನಮಗ ನಾಟಕಾ ಸಾಕಾತ್ರಿ.

[ಒಮ್ಮೆಲೆ ದೀಪ ಸಣ್ಣದಾಗುವುದು]

**ನಿಂಗ** :— ನೋಡಿದಿರಾ ?....ದೀಪ ಸಹಿತ ಆರಿ 'ಸಿನೀಮಾಕ್ಕ ನಡಿ ನಿಂಗಾ' ಅಂತ ಹೇಳ್ತೇತಿ....

**ಮಾಲಕ** :— (ಒಳಗೆ ನೋಡಿ ಸಿಟ್ಟಿನಿಂದ) ಏ—ಯಾರಿದ್ದೀರಿ ಅಲ್ಲಿ ?

**ಪಡದೆಯುವ** :— (ಬಂದು) ಯಾಕರಿ—

**ಮಾಲಕ** :— 'ಯಾಕರಿ' ಅಂದ್ರ ಹೋದೀತು ನಿನ್ನ ನೌಕರಿ? ದೀಪ ಯಾರು ಸಣ್ಣ ಮಾಡಿದರೊ?

**ಪಡದೆಯುವ** :— ಎಲ್ಲಾ ಮುಗೀತೂಂತ ತಿಳಿದ್ನಿರಿ—

**ನಿಂಗ** :— (ನಡುವೆಯೆ) ಎಲ್ಲಾ ಮುಗೀತು—ನೋಡು (ಕಿಸೆಯೊಳಗಿನ ಒಂದು ದೊಡ್ಡ ದಾರವನ್ನು ತೆಗೆದು) ಇಕ—ಹಿಡಿ ನಿನಗ ಕುಶಿ—ಬಕ್ಷೀಸು... ಪಡದೆ ಜಗ್ಗುವಂವಗ ದಾರಾನೇ ಕುಶಿ ಅಲ್ಲ....ಅದನ್ನ ಕಟ್ಟು ವ್ಯಾಗಿನ ಡವಕೀಗ, ಬಿಗಿ ಕೆಳಗ ನಿನ್ನ ಕುತ್ತಿಗೀಗ—

**ಪಡದೆಯುವ** :— (ಗಾಬರಿಯಿಂದ) ಯಾನಂದಿರಿ?

**ನಿಂಗ** :— ಉರುಲು ಹಾಕಿಕೊ ಅಂದೆ ಸುದ್ದ ಮಾತಿನಾಗ ಹೇಳ್ಳೋದಂದ್ರ. (ಗು. ನು ನಗುವನು) ನಾವೀಗ ಹೊಂಟವಿ ನಾಟಕ ಕಂಪನಿ ಬಿಟ್ಟು ಸಿನಿಮಾದ ಪೋಟೊ ಆಗಿ ಕುಣೀಲಾಕ—

**ಮಾಲಕ** :— (ಹಿರಿತನದಿಂದ) ಏಸಾಕ್ಮಾಡೊ ನಿನ್ನ ಹುಡುಗಾಟಕೆ! ಇಲ್ಲಿ ನೋಡು, ನಾಳಿಸಿಂದ ಚಹಾದ ವ್ಯಾಳ್ಯಾಕ್ಕೇ ತಾಲೀಮು ಮಾಡೋಣ ಹೊಸ ರಂಗ ತರೋಣ—ಮಂದಿಯು ಸಿನೀಮಾದೊಳಗ ಅಂತಹಾದ್ದೇನಿದೆ?

**ಗ್ರಂಥಕರ್ತ** :— (ತಿರಸ್ಕಾರದಿಂದ) ಹೋಗಲಿ ಬಿಡ್ರಿ ಅವರು ಸಿನೀಮಾಕ್ಕೇ.... ಇದ್ದ ಮಾತು ಅಂದ್ರೆ ನಿಮ್ಮ ಸುದೈವ....ಹೊಸ ಆಕ್ಟರ್ಸನ್ನ ಕೂಡಿಸರಿ, ಸುಶಿಕ್ಷಿತ ಹುಡುಗೇರನ್ನ ಕರೆಯಿಸಿರಿ. ಉತ್ತಮ ನಾಟಕ ಕಲಿಸರಿ—

**ಮಾಲಕ** :— (ಅವನನ್ನು ದಿಟ್ಟಿಸುತ್ತ) ಮಹಾಪ್ರಭೋ—ಆಜ್ಞೆ ! (ತಿರಸ್ಕಾರದ ದನಿಯಿಂದ) ಅದನ್ನ ಕೂಡಿಸರಿ, ಇದನ್ನ ಕಲಿಸರಿ — ಅನ್ನಲಿಕ್ಕೆ ನಾಯೇನು ಇನ್ನೊಬ್ಬರಿಗೆ ಧರ್ಮಸಾಲೆ ಅಂತ ನಾಟಕ ಕಂಪನಿ ತಗೆದೀನಿ ಅಂತ ತಿಳಿದಿರೊ ಏನು? (ಎದ್ದು) ಸಾಕು—ನೀವು ಸಾಕು, ನಿಮ್ಮ ಉತ್ತಮ ನಾಟಕ ಸಾಕು—

**ಗ್ರಂಥಕರ್ತ** :— ನಾನು ನಾಟಕ ಬರೆಯೋದೇ ಇಲ್ಲ—ಆಯಿತಿಲ್ಲೊ?

**ಮಾಲಕ** :— ನೀವು ಬರೆದರೂ ನಾವು ನಾಟಕ ಮಾಡೋದೇ ಇಲ್ಲ—ತಿಳೀತೇನು ?

**ನಿಂಗ**.— ನೀವು ಯಾರ ನಾಟಕ ಮಾಡಿದರೂ—

**ಗುರುರಾಜ** :— ——ನಾವು ಸಿನೀಮಾಕ್ಕೇ ಹೋಗವ್ರು !

**ನಿಂಗ** :— ಆಯಿತಲ್ಲೊ ? (ಪಡದೆಯುವನು ಗದ್ದ ಹಿಡಿದು ಮುಖವನ್ನೆತ್ತುವನು)

**ಗುರುರಾಜ** :— ತಿಳೀತೇನು ? (ಪಡದೆಯುವನ ಬೆನ್ನು ತಟ್ಟುವನು)

**ಮಾಲಕ** :— (ಕೂಗುತ್ತ) ನಾನು ಯಾರ ನಾಟಕಾನೂ ಮಾಡೋದಿಲ್ಲ, **ನಾಟಕಾನೇ** ಮಾಡೋದಿಲ್ಲ—

**ಪಡದೆಯುವ** :— (ಏನೂ ತಿಳಿಯದೆ) ಆಯಿತೇನ್ರಿ ?

**ಗ್ರಂಥಕರ್ತ** :— ತಿಳಿಯಲೇ ಇಲ್ಲ ?

**ಮಾಲಕ** :— (ಉತ್ಸಾಹದಿಂದ) ನಡೀಯೊ, ನಿಂಗಾ; ನಡೀ, ಗುರೂ. ಇಂಥಾ ನಾಟಕ ಬರೆಯುವವರ ಕಾಟ ತಪ್ಪಿಸೋದಕಾದರೂ ನಾವೆಲ್ಲಾರೂ ಸಿನೀಮಾಕ್ಕ ಹೋಗೋಣ—ಅಂದ್ರ ನಮ್ಮದೇ ಒಂದು ಸಿನೀಮಾ ಕಂಪನಿ ಮಾಡೋಣ.

(ಎಂದು ಸೀಟಿಯನ್ನು ಕೈಯಲ್ಲಿ ಹಿಡಿಪನು, ಮೂಲೆಯಲ್ಲಿದ್ದ ಗಂಟೆಯನ್ನೂ ತೆಗೆದುಕೊಳ್ಳುವನು).

**ಗ್ರಂಥಕರ್ತ** :— (ಹೆದರಿಕೆಯ ದನಿಯಿಂದ) ಏನಂದಿರಿ ? ನೀವು—ನೀವೆಲ್ಲಾರು—ಕೂಡಿಯೆ ಸಿನೀಮಾ ಕಂಪನಿ ಮಾಡುವವರೆ ?

**ನಿಂಗ** :— (ತನ್ನ ಮೀಸೆಯನ್ನು ಗುರುರಾಜನ ಮುಖಕ್ಕಿಟ್ಟು)ಹಾಕು ನನ್ನ ಮೀಸೆಗೆ ನಿನ್ನ ಕೈಯಿಂದ ಹುರಿ—

**ಮಾಲಕ** :— (ಕಟಿದ ದನಿಯಲ್ಲಿ) ಅಹುದು— ಹೌದು—ಅಹುದು! ಬರೀರಿನ್ನು ಬೇಕಾದಷ್ಟು ನಾಟಕ....ನಡೀರಿ—ನಿಂಗಾ, ಗುರೂ—(ಸೀಟಿಯನ್ನು ಬಾಯಿಗಿಡಬೇಕೆನ್ನುವನು)

**ಗ್ರಂಥಕರ್ತ** :— (ನಿರಾಶೆಯಿಂದ ಕೈ ಚಲ್ಲಿ) ಇನ್ನು ನಾಟಕ ಬರೆಯಲೇ ಬೇಕಾಯ್ತು.

**ಮಾಲಕ** :— (ತಿಳಿಯದೆ) ಬರೀನೇ ಬೇಕಾಯ್ತು ಅಂದ್ರೆ ?

**ಗ್ರಂಥಕರ್ತ** :— (ತನ್ನಷ್ಟಕ್ಕೆ ಎಂಬಂತೆ) ನನ್ನದೇ ದುರ್ದೈವ ಅಂತ ಹೇಳಿದೆನಲ್ಲ ? ಇದ್ದ್ಯಾತಂದ್ರೆ, ನಾನೇ ಸಿನೆಮಾಕ್ಕೆ ಹೋಗಬೇಕೂ ಅಂದಿದ್ದೆ

**ಮಾಲಕ** :— ಏನು ?
**ನಿಂಗ** :— ಎಲೆ !
**ಗುರುರಾಜ**:— ಆಂ !

**ಗ್ರಂಥಕರ್ತ** :— (ಆಶೀರ್ವಾದ ಕೊಡುವವನಂತೆ ಕೈಯೆತ್ತಿ) ಇನ್ನೇನು ಹೆದರಬೇಡಿರಿ.... ಅದಕೇ ಹೇಳಿದೆನಲ್ಲ-ನಾಟಕಾನೇ ಬರೀಬೇಕಾಯ್ತೊಂತ—

**ಮಾಲಕ** :— ಆಯಿತೇನು ?

**ನಿಂಗ** :— ತಿಳೀಲಿಲ್ರಿ....

**ಗ್ರಂಥಕರ್ತ** :— ಸಿನೇಮಾಕ್ಕ ಸೇರಿದರೂ ನಿಮ್ಮದೆ ಕಂಪನಿ ಅಂದ ಮ್ಯಾಲೆ ನಾಟಕ ಬರೆಯೋದೇ ನೆಟ್ಟಗ ಅಂತ—

**ಮಾಲಕ** :— (ಅಪಮಾನಿತನಾಗಿ) ಯಾರಿಗೆ ಹೇಳ್ತೀರಿ ಈ ಮಾತು— (ಎಂದು ಕೈಯನ್ನೆತ್ತಲು ಗಂಟೆ ಬಾರಿಸುವದು. ಕೂಡಲೆ ಪಡದೆಯುವನು ಹಾ-ಹಾರಿದವನಂತೆ ಒಳಗೆ ಓಡುವನು. ಎಲ್ಲರೂ ಏನನ್ನೊ ಮಾತನಾಡಬೇಕೆನುವಷ್ಟರಲ್ಲಿ ಗಂಟೆಯ ಘಣಘಣದೊಡನೆ)

(ತೆರೆ)

**ಮುಗಿದುದು**




( ಸೋಮವು ಚಲ್ಲುವುದು, ಕೂಡಲೆ ಆನಂದದ ಹುಂಕಾರದಿಂದ ನಾಲ್ಕೂ
ದೇವತೆಗಳು ಅಡ್ಡಬಿದ್ದು ನೆಲಕ್ಕೆ ನಾಲಿಗೆ ಚಾಚುವರು.)

—'ಜಯಂತಿ' ಕೃಪೆಯಿಂದ

ಹಾದಿಯ ಹೊತ್ತಿಗೆ ೪



# ಸುರಾ-ಸುರ ಯುದ್ಧ

ಇಲ್ಲವೆ

# ಅಮರಾವತಿಯಲ್ಲಿ ಅಗಸ್ತ್ಯ ೧



ಬರೆದವರು

ಶ್ರೀರಂಗರು



ಕನ್ನಡ ಸರಸ್ವತಿ ಭಾಂಡಾಗಾರ

— ಧಾರವಾಡ —

ಬೆಲೆ ೩ ಆಣೆ

# ಪಾತ್ರಗಳ ವಿವರ

| | | |
|---|---|---|
| ೧. ವಿಷ್ಣು | ೨. ಬ್ರಹ್ಮ | ೩. ಶೇಷ |
| ೪. ಶಿವ | ೫. ಇಂದ್ರ | ೬. ಅಗ್ನಿ |
| ೭. ಯಮ | ೮. ವಾಯು | ೯. ಋಷಿ |
| | ೧೦. ಮರ್ತ್ಯ | |

# ಸುರಾ-ಸುರ ಯುದ್ಧ

ಇಲ್ಲವೆ

# ಅಮರಾವತಿಯಲ್ಲಿ ಅಗಸ್ತ್ಯ ೧!

## ದೃಶ್ಯ ೧

[ ಬ್ರಹ್ಮಲೋಕದಲ್ಲಿ ಬ್ರಹ್ಮನು ಹೌಹಾರಿದವನಂತೆ ಕುಳಿತಿದ್ದಾನೆ; ಇಷ್ಟೇಕೆ— ಹೆದರಿ ನಡುಗುತ್ತಲಿದ್ದಾನೆ ಎಂದು ಹೇಳಬಹುದು. ಯಾಕೆಂದರೆ ಅವನ ಆಸನವಾದ ಕಮಲವು ನಡುಗುತ್ತಿದೆ. ಕಮಲ ಹೊಯ್ದಾಡದೆ ಮಾಡುವುದೇನು? ಯಾಕೆಂದರೆ, ಅದನ್ನು ಉದರದಲ್ಲಿ ಧರಿಸಿದ ವಿಷ್ಣುವು ಉರುಳಾಡುವ ಸ್ಥಿತಿಯಲ್ಲಿದ್ದಾನೆ. ಪಾಪ! ಅವನಾದರೂ ಮಾಡಬೇಕೇನು? ಅವನ ಹಾಸಿಗೆಯಾದ ಶೇಷನು ಅತ್ಯಂತ ಕೋಪಾವಿಷ್ಟನಾಗಿ ಭುಸುಗುಡುತ್ತ ಹೆಡೆಯನ್ನು ತೂಗುತ್ತಿದ್ದಾನೆ. ಹೀಗೆ ಆದಿಶೇಷನ ನಿಮಿತ್ತವಾಗಿ ಅಂತ್ಯಬ್ರಹ್ಮನ ವರೆಗೂ ಇಡಿಯ ದೃಶ್ಯವು ಹೊಯ್ದಾಡುತ್ತಿದೆ. ]

ವಿಷ್ಣು:—(ಒಮ್ಮೆಲೆ ತಲೆ ಹಿಡಿದುಕೊಂಡು ಕಣ್ಣುಮುಚ್ಚಿ) ಪಿತಾಮಹಾ, ಇನ್ನು ಹೊಯ್ದಾಡುವುದನ್ನು ತಡೆಯಬಾರದೇ? ನನಗೆ ತಲೆ ತಿರುಗಿ ಪಿತ್ತವಿಕಾರವಾಗುವಂತಿದೆ.

ಬ್ರಹ್ಮ:—(ಹುಶ್ಶೆಂದು ದಣಿದು ಮಾತನಾಡುತ್ತ) ಭೋ ಪದ್ಮನಾಭಾ, ನಿನ್ನ ತಲೆ ತಿರುಗಿ ಪಿತ್ತವಿಕಾರವಾಗುವುದೆಂದಮೇಲೆ, ನಿನಗಿಂತಲೂ ಮೇಲಕ್ಕೆ ಕುಳಿತ ನನ್ನ ತಲೆ ಎಷ್ಟು ತಿರುಗುತ್ತಿರಬಹುದು! ಊಹಿಸಬಲ್ಲೆಯಾ? ಇದಲ್ಲದೆ ಪದ್ಮವೂ ಹೊಯ್ದಾಡುತ್ತಿರುವುದರಿಂದ ಸಿಡಿದೇಳುವ ಭೃಂಗಸಮೂಹದ ಬಾಧೆಯೂ ನನಗೆ ತಡೆಯದಂತಾಗಿದೆ. ನಿಜವಾಗಿ ನೀನು ತಡೆದರೆ ಈ ತೂಗಾಟ ನಿಲ್ಲುವುದು.

**ಶೇಷ**:—(ಬುಸುಗುಡುತ್ತ ತಿರಸ್ಕಾರದ ದನಿಯಲ್ಲಿ) ಯಾರು ತಡೆದರೂ ತೂಗಾಟ ನಿಲ್ಲದು! ಎಲ್ಲರಿಗೂ ಆಧಾರನಾಗಿ ನಾನು ಕೆಳಗೆ ನಿಂತಿದ್ದೇನೆ. ನಾನು ಹೊಯ್ದಾಡುತ್ತಿದ್ದೇನೆ, ಅನಂತ ಕಲ್ಪಗಳವರೆಗೂ ನಾನು ಹೊಯ್ದಾಡುವ ನಿಶ್ಚಯವನ್ನು ಮಾಡಿದ್ದೇನೆ—

**ಬ್ರಹ್ಮ**:—(ಓಕರಿಕೆ ಬಂದವನಂತೆ ನಟಿಸಿ ಬಾಯಿ ಮುಚ್ಚಿಕೊಳ್ಳುವನು.)

**ಶೇಷ**:—(ಅಣಕಿಸಿನಿಂದ) ಓಹೋ! ಈಗ ತಿಳಿಯಿತೆ ಪಿತಾಮಹನಿಗೆ? ಮೈ ತೂಗಿದರೆ ತಲೆತಿರುಗುವುದೆಂಬ ಅನುಭವ ಈಗ ಬಂದಿತೆ ಆದಿಬ್ರಹ್ಮನಿಗೆ?

**ಬ್ರಹ್ಮ**:—(ದೀನವಾಣಿಯಿಂದ) ವಾಸುಕಿರಾಯಾ, ವೃದ್ಧನ ಮೇಲೆ ಕರುಣೆಯಿಂದಾದರೂ ತಡೆಯಬಾರದೆ?

**ವಿಷ್ಣು**:—ಆದಿಶೇಷಾ, ಸೃಷ್ಟಿಕರ್ತನ ತಲೆ ತಿರುಗಿದೆ, ಅನರ್ಥವಾದೀತು! ತಡೆಯಬಾರದೆ?

**ಶೇಷ**:—ಆಗಬೇಕಾದ ಅನರ್ಥ ಉಳಿದಿದೆ ಏನು? ಸೃಷ್ಟಿಕರ್ತನ ತಲೆ ತಿರುಗಿದೆ ಎಂಬುದು ಅವನ ಸೃಷ್ಟಿಯೊಳಗಿನ ತಲೆ ತಿರುಗಿದ ಜನರಿಂದಲೆ ತಿಳಿದುಬಂದಿದೆ ನನಗೆ. ತಲೆ ತಿರುಗಿದರೆ ಮೈನೋವು, ಮನನೋವು ಆಗುವುವೆಂಬುದು ನನ್ನನ್ನು ಮಂದಾರಕ್ಕೆ ಕಟ್ಟಿ ಸಮುದ್ರಮಂಥನ ಮಾಡುವಾಗ ಸ್ಮರಣೆಗೆ ಬರಲಿಲ್ಲವಲ್ಲ ನಿಮಗೆ! ಆಗ ನನ್ನ ಸ್ಥಿತಿ ಏನಾಗಿರಬೇಕು?

**ವಿಷ್ಣು**:—ಅದು ಲೋಕಸಂಗ್ರಹದ ಕಾರ್ಯ!

**ಶೇಷ**:—(ತಿರಸ್ಕಾರದ ನಗೆಯಿಂದ) ಯಾವ ಲೋಕದಲ್ಲಿ ಯಾವುದರ ಸಂಗ್ರಹವಾಯಿತೊ! ನಿರರ್ಥಕವಾಗಿ ನನ್ನನ್ನು ಅಂದು ಗೋಳಿಡಿಸಿ—

**ಬ್ರಹ್ಮ**:—ಫಣೀಂದ್ರಾ, ಹದಿನಾಲ್ಕು ರತ್ನಗಳನ್ನು ದೇವತೆಗಳಿಗೆ ಒದಗಿಸಿ ಕೊಟ್ಟು—

**ಶೇಷ**:—(ಸಿಟ್ಟಿನಿಂದ) ಹದಿನಾಲ್ಕು ಅಲ್ಲ—ಹದಿಮೂರು ಎನ್ನು—ಪಿತಾಮಹಾ—

**ವಿಷ್ಣು**:—(ಆಶ್ಚರ್ಯದಿಂದ) ಹದಿಮೂರು! ಹಾಗೆಂದರೆ? ಒಂದನ್ನು ಮತ್ತೆ ರಾಕ್ಷಸರು ಅಪಹರಿಸಿದರೊ? ಎಲಾ ದಾನವಾಧಮರೆ, ಇದೊ ಇನ್ನೊಂದು ಅವತಾರವನ್ನು ತಾಳಿ—

ಶೇಷ:—(ಹಂಗಿಸುವ ದನಿಯಲ್ಲಿ) ಹಾಂ, ಹಾಂ, ಅವತಾರದ ಧಣೀ, ಚಕ್ರಪಾಣೀ ನನ್ನ ಮಾತನ್ನು ಪೂರ್ತಿಯಾಗಿ ಕೇಳಿಕೊಳ್ಳುವಂತಹನಾಗು. ಒಂದು ರತ್ನ ಅಪಹೃತವಾಗಿದೆ; ಆದರೆ, ಅದನ್ನು ಅಪಹರಿಸಿದವರು ದಾನವರಲ್ಲ, ಮಾನವರು!

ಬ್ರಹ್ಮ:—(ಚಕಿತನಾಗಿ) ಏನು? — ನನ್ನ ಸೃಷ್ಟಿಯೊಳಗಿನ ಮಾನವರೆ?

ವಿಷ್ಣು:—(ವೀರಾವೇಶದಿಂದ) ಹೇಳು — ಹೇಳು — ಯಾವ ರತ್ನವನ್ನು? ಲಕ್ಷ್ಮಿಯನ್ನೆ? (ಶೇಷನು 'ಅಲ್ಲ' ಎಂದು ತಲೆ ಅಲ್ಲಾಡಿಸುವನು.) ಕೌಸ್ತುಭವನ್ನೆ? (ಶೇಷನು ಮೊದಲಿನಂತೆ ತಲೆ ಅಲ್ಲಾಡಿಸುವ ರಭಸಕ್ಕೆ ಬ್ರಹ್ಮನು ಬೆಚ್ಚಿ 'ಅಯ್ಯೊ, ಸಾವಿರ ನಾಲಗೆಗಳ ಶೇಷಾ, ಬಾಯಿಯಿಂದ ಹೇಳು, ತಲೆಯಿಂದ ಬೇಡ' ಎನ್ನುತ್ತ ಮುದುಡಿಕೊಳ್ಳುವನು.)....ಪಾರಿಜಾತವನ್ನೆ?

ಶೇಷ:—(ಗದ್ಗದಿಸುತ್ತ) ಅಲ್ಲ—ಅಲ್ಲ—ಅಲ್ಲ—! ಬಾಯಿಯಿಂದಲೇ ಹೇಳುವೆ. ಅಂದು ನನ್ನನ್ನು ಕಡೆಗೋಲಿಗೆ ಕಟ್ಟಿ ತಿರುಗಿಸಿದುದಕ್ಕೆ ಇಂದಿಗೂ ನನ್ನ ಮೈ ತಿರುಗುತ್ತಿದ್ದು, ಅದಕಾಗಿ ನನ್ನ ಬೆನ್ನುಮೇಲಿನ ಪೃಥ್ವಿ ಕೂಡ ತಿರುಗುತ್ತಲಿದೆ! ನೋಡಿದಿರಾ? ಇಷ್ಟು ಕಷ್ಟದಿಂದ ಕಡೆದ ರತ್ನಗಳಲ್ಲಿ ಒಂದಾದ ಸುರೆಯನ್ನು—

ವಿಷ್ಣು:—(ಬೆಚ್ಚಿ) ಏನು—ಸುರೆಯನ್ನು—

ಶೇಷ:—ಸುರೆಯನ್ನು ಮಾನವರು ಸುಟ್ಟು ಶೇಷವಿಲ್ಲದಂತೆ ಮಾಡಿದರು! ದೇವತೆಗಳ ರತ್ನವಾದ ಸುರೆಯು ನಿಂದ್ಯವಂತೆ—! ಹಸುವಿನ ಹಾಲು ಹಿತಕರವಂತೆ!

ವಿಷ್ಣು:—(ಆನಂದದಿಂದ) ಹಸುವಿನ ಹಾಲು! ಭೂಲೋಕದಲ್ಲಿ ಹಸುಗಳ ಪ್ರಚಾರ ನಡೆದಿದೆಯೆ! ಆಹಾ! ಹಾಗಾದರೆ ನಾನು ಮತ್ತೆ ಕೃಷ್ಣಾವತಾರವನ್ನು ತಾಳಿ—ಮತ್ತೆ ಗೋಪಿಕಾಕ್ರೀಡೆಯನ್ನು—

ಶೇಷ:—(ನಡುವೆಯೆ) ಕೃಷ್ಣಾವತಾರದ ಮುಖ ಕಪ್ಪಿಟ್ಟಿತು! ಗೋಪಿಕೆಯರ ಪೀಡೆ ತಪ್ಪಿಟ್ಟಿತು! ನೀನು ಕೃಷ್ಣ ಆಗುವೆ ಹೇಗೆ? ಮುಂಚೆ ಬಲರಾಮನಿಲ್ಲದೆ ಕೃಷ್ಣನ ಪ್ರವೇಶವೆ ಇಲ್ಲ. ಮಾನವಲೋಕದಲ್ಲಿ ಮದಿರಾಪಾನವೆ ನಿಷಿದ್ಧವಾದಾಗ ನಿನಗೆ ಬಲರಾಮನಾಗಿ ಯಾರು ಸಹಾಯ

ಮಾಡುವರು? ಅವತಾರವಂತೆ! ಮಾನವರಿಂದಾದ ಅವಮಾನವನ್ನು ತಡೆದುಕೊಳ್ಳುವ ಹೇಡಿ ದೇವನನ್ನು—

ಬ್ರಹ್ಮ:—(ಕನಲಿ) ಮಾನವರು! ನನ್ನ ಮನಸಿನಿಂದ ಹುಟ್ಟಿ ಸಾಯುವ ಹುಳಗಳು! ಅವರಿಗೆ ದೇವ ಹೇಡಿಯೇ! ಸಂತಪ್ತನಾದ ನನ್ನ ಸರ್ವಾಂಗ ನಡುಗುತ್ತಿದೆ—

ಶೇಷ:—(ತಿರಸ್ಕಾರದ ನಗೆಯಿಂದ) ಕೆಳಗಿನಿಂದ ನಾನು ನಡುಗಿಸುತ್ತೇನೆಂದು ನಡುಗುತ್ತಿರುವಿ, ಪಿತಾಮಹಾ, ಸಿಟ್ಟಿನಿಂದ ಎಂದು ಸಾಧಿಸಿಕೊಳ್ಳಬೇಡ.

ಬ್ರಹ್ಮ:—(ದರ್ಪದಿಂದ) ಯಾರು? ಶಿವನೆಲ್ಲಿ? (ಚಪ್ಪಾಳೆ ತಟ್ಟುತ್ತ) ಭೋ! ನೀಲಕಂಠಾ—

ಶಿವ:—(ಪ್ರವೇಶಿಸಿ) ಹಿರಣ್ಯಗರ್ಭನೆ, ಆಜ್ಞೆಯಾಗಲಿ.

ಬ್ರಹ್ಮ:—(ರಭಸದಿಂದ) ಇದೊ—ಈಗಿಂದೀಗ ಈ ಮಾನವಕ್ರಿಮಿಗಳ ಸಂಹಾರ ಕಾರ್ಯವನ್ನು ಕೈಕೊಳ್ಳುವಂಥಾತ್ತನಾಗು.

ಶಿವ:—(ಅತ್ಯಂತ ನಮ್ರತೆಯಿಂದ ಕೈಮುಗಿದು, ಉಗುಳ್ನುಂಗುತ್ತ) ಹೇ, ಸ್ವಯಂಭುವಾ, ಶಿರಸಾ ವಂದಿಸುವೆ, ಕ್ಷಮೆ ಇರಲಿ. ತನ್ನ ಆಜ್ಞೆ ನನ್ನ ಜೀವನದುಸಿರು—ಆದರೆ ಇದೊಂದು ಆಜ್ಞೆ ಎಂದರೆ ಮಾತ್ರ ಕಂಠದಲ್ಲಿ ಸಿಕ್ಕ ಉಸುರಿನಂತೆ—

ವಿಷ್ಣು:—(ಚಕಿತನಾಗಿ) ಶಂಕರಾ, ಸಂಹಾರಭಯಂಕರಾ, ಇದೇನು ಹೇಳುವೆ? ಜಗತ್ತನ್ನು ಸುಡುವ ಹಾಲಾಹಲವನ್ನು ಕಂಠದಲ್ಲಿ ದಕ್ಕಿಸಿ ಕೈಲಾಸವಾಸಿ ಎನಿಸಿದ ನೀನು ಮಾನವರೆದುರು ಮೆತ್ತಗಾಗುವುದೆ?

ಶಿವ:—ಮಾನವರು! ವೈಕುಂಠವಾಸಿಯಾದ ನಿನಗೆ ಭೂಲೋಕವು ದೂರವಾಗಿದೆ. ಕೈಲಾಸಕ್ಕೆ ಸಮೀಪದಲ್ಲಿಯೆ ಇದ್ದಾರೆ ಮಾನವರು. ಅವರನ್ನು ಬಲ್ಲೆ ನಾನು. ನಾನು ಹಾಲಾಹಲ ಒಂದನ್ನೆ ದಕ್ಕಿಸಿದರೆ ಮಾನವರು ಎಷ್ಟೋ ಹಾಲಾಹಲಗಳನ್ನು ದಕ್ಕಿಸಿಕೊಂಡಿದ್ದಾರೆ! ಕ್ಷೀರಸಾಗರದಲ್ಲಿದ್ದ ನಿನಗೆ ಲವಣನೀರಿನಿಂದ ವಿಷದಕ್ಕಿಸುವ ಮಾನವರ ಶಕ್ತಿ ತಿಳಿಯುವುದು ಹೇಗೆ? ವ್ಯರ್ಥ ಮಾತೇಕೆ?

ಬ್ರಹ್ಮ:—( ಹಂಚಿಕೆ ಹಾಕುತ್ತ , ಹಾಗಾದರೆ, ವಿಷ್ಣೋ, ನೀನು ಈ ಕಾರ್ಯ ವನ್ನು ವಹಿಸಬೇಕು. ಪುರುಷೋತ್ತಮನಾದ ನೀನು ಹಿಂದಿನಂತೆ ಮೋಹಿನಿಯ ವೇಷದಿಂದ ಭೂಮಿಗಿಳಿದು—

ವಿಷ್ಣು:—( ನಡುಗೆಯಿಂ ) ವಿಧಾತಾ, ಯಾಕೆ ನನ್ನನ್ನು ನಾಚಿಕೆಗೆ ಗುರಿಮಾಡುವೆ? ಮಾನವಲೋಕಕ್ಕೆ ಬೇಕಾದ ವೇಷದಿಂದ ಹೋಗಲು ಸಿದ್ಧನಿದ್ದೇನೆ, ಆದರೆ ಹೆಣ್ಣಿನ ವೇಷ ಬೇಡ. ನನ್ನ ಹೆಂಡತಿಯಾದ ಲಕ್ಷ್ಮಿ ದಿನೇ ದಿನೇ ಮಾನವರ ಸಹವಾಸವನ್ನೆ ಹೆಚ್ಚಾಗಿ ಕೋರುತ್ತಿರುವಾಗ ನಾನು ಹೆಣ್ಣಿನ ವೇಷದಿಂದ—

ಬ್ರಹ್ಮ:—( ಹತಾಶನಾಗಿ ) ಹಾಗಾದರೆ ಮಾಡಬೇಕೇನು? ನಾನೇ ಇನ್ನು ಮುಂದೆ ಸೃಷ್ಟಿಯನ್ನು ತಡೆದುಬಿಡಲಾ?

ಶೇಷ —( ಖೊಳ್ಳನೆ ನಕ್ಕು ) ಮುದುಕರಾದವರು ಮತಿಗೇಡಿಗಳಾಗುವರೆಂಬ ಮಾತು ಸುಳ್ಳಲ್ಲ. ಪೃಥ್ವಿಯ ಭಾರವನ್ನು ಯಾವಾಗಲೂ ಹೊತ್ತು ನಿಂತ ನನ್ನ ಅನುಭವದ ಮಾತನ್ನು ಕೇಳಿರಿ. ಸೃಷ್ಟಿ–ಸ್ಥಿತಿ–ಸಂಹಾರ ಗಳ ಶಕ್ತಿ ಈಗ ಮಾನವನಲ್ಲಿಯೆ ಇದೆ ನಿಮ್ಮ ಆಟ ನಡೆಯದು.

ವಿಷ್ಣು:—ನನಗೊಂದು ಹಂಚಿಕೆ ಹೊಳೆದಿದೆ. ಮಾನವರ ಗುಣದೋಷಗಳನ್ನು ಇಂದ್ರನು ಚೆನ್ನಾಗಿ ಬಲ್ಲನು. ಅವನಿಗೇ ಆಜ್ಞೆಯನ್ನು ಕೊಡೋಣ. ಸುರಾಸಂಸ್ಥಾಪನೆ ಮಾಡೆಂದು ಹೇಳೋಣ.

ಶೇಷ:—ಇಲ್ಲವಾದರೆ— ಸಮುದ್ರಮಂಥನದ ಯಾತನೆಯ ಸೇಡನ್ನು ತೀರಿಸಲು ನಾನು—

ಬ್ರಹ್ಮ:—ಹಾಂ— ತಡೆ, ಶೇಷಾ, ತೂಗಾಡಬೇಡ. ಹಂಸದ ಮೇಲೆ ಕುಳಿತಾಗ ಕಣ್ಣು ತಿರುಗಿ ಬಿದ್ದೇನು. ತಡೆ.

( ಚಪ್ಪಾಳೆ ತಟ್ಟುವನು. ದೃಶ್ಯ ಮಾಯವಾಗುವುದು. )

## ದೃಶ್ಯ ೨

[ ಅಮರಾವತಿಯಲ್ಲಿ ಇಂದ್ರಸಭೆ. ಸಭೆಯ ಆಸನಗಳು ಬರಿದಾಗಿವೆ. ಇಂದ್ರ ನೊಬ್ಬನೆ ಚಕಿತನಾಗಿ ಬಾಗಿಲಿನಿಂದ ತನ್ನ ಸಿಂಹಾಸನದವರೆಗೆ ಮೇಲಿಂದಮೇಲೆ ತಿರುಗಾಡುತ್ತಿದ್ದಾನೆ. ಒಮ್ಮೆ ಆಶ್ಚರ್ಯ, ಒಮ್ಮೆ ಸಿಟ್ಟು, ಒಮ್ಮೆ ಹೆಮ್ಮೆ

ಹೀಗೆ ಒಂದೊಂದಾಗಿ ಭಾವನೆಗಳು ತಿರುಗಾಡುವಾಗ ಅವನ ಮುಖದಲ್ಲಿ ಮೂಡುತ್ತವೆ. ಕೆಲಹೊತ್ತಿನ ಮೇಲೆ ಸಭಾಮಂದಿರದ ನಟ್ಟನಡುವೆ ನಿಂತು ಮುಗುಳ್ನಗೆಯಿಂದ ಮುಖವರಳಿ—]

ಇಂದ್ರ:—ಭೂಮಿಯಲ್ಲಿ ಕಲಿಕಾಲ ಬಂದರೆ ಸ್ವರ್ಗದಲ್ಲಿ ವಿಪರೀತ ಫಲ! ಹಹ! ಬ್ರಹ್ಮಾದಿಗಳು ನನಗೆ ಶರಣುಬರಬೇಕೆಂದರೆ—? (ಮತ್ತೆ ಒಮ್ಮೆಲೆ ಸಿಟ್ಟಿನಿಂದ ಬಾಗಿಲ ಕಡೆ ನಡೆಯುತ್ತ) ಈ ಹೊತ್ತು ಆಸ್ಥಾನಕ್ಕೆ ಯಾರೂ ಬಂದಿಲ್ಲವೇಕೆ? ಈ ಹಾಳು ರಂಭೆಯಾದರೂ ಬರಬಾರದಾಗಿತ್ತೆ? ಅಗ್ನಿ ಬೆಂಕಿಯಲ್ಲಿ ಸುಟ್ಟುಕೊಂಡನೇ? .... ವಾಯು ಹಾರಿ ಹೋದನೆ ಗಾಳಿಯಲ್ಲಿ? .... ವರುಣ ಮುಳುಗಿದನೆ ಸಮುದ್ರದಲ್ಲಿ?.... ಅಥವಾ ಇಂದ್ರನಿಗೆ ಅವಮರ್ಯಾದೆ ಮಾಡಬೇಕೆಂದಿರುವರೊ (ತಡೆದು ನಿಂತು ಮತ್ತೆ ಮುಗುಳ್ನಗೆಯಿಂದ) ಬ್ರಹ್ಮಾದಿಗಳೇ ಬಂದು ಕೈಮುಗಿದು ನಿಂತಾಗ ನನ್ನ ಅವಮರ್ಯಾದೆ ಮಾಡುವವರು ಯಾರು? (ಸಡಗರದಿಂದ ನಡೆದು ಹೋಗಿ ಸಿಂಹಾಸನದ ಮೇಲೆ ಕುಳಿತುಕೊಂಡು) ಸ್ವಾಹಾಸೇವನವನ್ನಾದರೂ ಮಾಡೋಣ. ಯಾವುದನ್ನು ಸೇವಿಸೋಣ? ಕೃತಯುಗದ ಅಮೃತ—? ಛಿ—ಸರ್ವಸಾಮಾನ್ಯರ ಪೇಯವದು. ತ್ರೇತಾಯುಗದ ಸುರೆಯನ್ನು ಸೇವಿಸೋಣವೆ—? ಉಹುಂ....ಯಜ್ಞಕುಂಡದ ಹೊಗೆ ಬಡಿದಿದೆ ಅದಕ್ಕೆ....ದ್ವಾಪರದ ಮದಿರೆಯನ್ನು—? ಥೂ—ಅದರಲ್ಲಿ ಮದಿರೆಗಿಂತ ಮಥುರೆಯ ಹಾಲೇ ಹೆಚ್ಚು....ಅಂತೂ ಕಲಿಯುಗದ ಸೋಮರಸವನ್ನೇ ಸೇವಿಸಬೇಕಾಯಿತು....ಯಾವುದೇನು? ಆನಂದೋದ್ರೇಕದಲ್ಲಿ ಮನಸ್ಸೇ ಮಾದಕವಾಗಬಹುದು. ಯಾರಲ್ಲಿ?

(ಮರ್ತ್ಯಜೀವಿಯೊಬ್ಬನು ಬರುವನು.)

ಇಂದ್ರ:—(ಬೆರಗಾಗಿ) ಯಾರು? ಯಾರು ನೀನು? ಇಲ್ಲಿ ಯಾಕೆ ಬಂದೆ? ಹೇಗೆ ಬಂದೆ? ನಿನ್ನ—

ಮರ್ತ್ಯ:—ಹಾಂ, ಹಾಂ, ತಡೆ. ದೇವತೆಗಳು ಕಣ್ಣೆವೆ ಬಡೆಯೋದಿಲ್ಲ ಅಂದರೆ ಬಾಯಿ—ಉಸಿರೂ ಹಿಡಿಯೋದಿಲ್ಲವೊ ಏನು? ನಾನು ಮರ್ತ್ಯ. ಹುಟ್ಟಿ—ಸತ್ತು—ಮತ್ತೆ—ಹೊಸತಾಗಿ ಹುಟ್ಟಿ—ಮತ್ತೆ—ಸತ್ತು—

ಮತ್ತೆ ಹೊಸತಾಗಿ ಹುಟ್ಟಿ—ಮತ್ತೆ—ಹೀಗೇ ಸದಾಕ್ಕೂ ತನ್ನ ದಿಂದ ಬೆಳಗುವ ಶಾಶ್ವತ ತಾರುಣ್ಯ ಭೋಗಿಸುವ ನನ್ನಂತವರಿಗೆ ಮರ್ತ್ಯ ಅಂತಾರೆ—ತಿಳಿಯಿತೆ? ಹುಟ್ಟಿದ್ದು ಯಾಕೆ ಗೊತ್ತಿಲ್ಲ, ಸಾಯೋದು ಹೇಗೆ ಗೊತ್ತಿಲ್ಲ ಇಂತಹ ನೀನು! ಹೋಗಲಿ. ನಿನ್ನ ಮಾತು ಕೇಳಿ ಭೂಲೋಕದಿಂದ ಬಂದೆ.

ಇಂದ್ರ:—(ಬೆರಗಾಗಿ) ಭೂಲೋಕದಲ್ಲಿ ನನ್ನ ಮಾತು—

ಮರ್ತ್ಯ:—(ನಡುವೆಯೆ) ಸ್ವರ್ಗಲೋಕದಲ್ಲಿ ಮೊದಲು ನನ್ನ ಮಾತು ಕೇಳು. ಗುಡುಗಿನ ನಿನ್ನ ದನಿ ಕೇಳಿಸಲಿಲ್ಲ ನನಗೆ. ಯಾರು ಎಲ್ಲಿ ಮಾತಾಡಿ ದರೂ ಕೇಳಿಸುವಂತಹ ಯಂತ್ರ ನನ್ನಲ್ಲಿದೆ, ಅದರಿಂದ ನಿನ್ನ ಮಾತು ಕೇಳಿಸಿತು. ಬೇಕಾದ ಲೋಕಕ್ಕೆ ಹಾರಿ ಹೋಗುವ ಯಂತ್ರ ನಮ್ಮ ಲ್ಲಿದೆ, ಅದರ ಸಹಾಯದಿಂದ ಬಂದೆ. ಇದಲ್ಲದೆ ನನಗೆ ಇಂದಿಲ್ಲ ನಾಳೆ ಸ್ವರ್ಗಕ್ಕೆ ಬರಲೇ ಬೇಕಾಗಿತ್ತು. ಇಲ್ಲಿಯ ಕೆಲಸ ನನಗೆ ಒಪ್ಪಿ ಸಿದ್ದಾರೆ—

ಇಂದ್ರ:—(ಅವನನ್ನು ದಿಟ್ಟಿಸಿ) ನೀನು ಮತಿಗೆಟ್ಟ ಮಾನವನಿದ್ದಿರಬಹುದು.

ಮರ್ತ್ಯ:—ಮತಿಗೆಟ್ಟ ಮಾನವ ಅಲ್ಲ, ಮದ್ಯ ಬಿಟ್ಟ ಮಾನವ ನಾನು. ನಾನಷ್ಟೆ ಅಲ್ಲ, ಜಗತ್ತಿನಲ್ಲಿ ಯಾರ‍್ಯಾರು ಮದ್ಯಸೇವನೆ ಮಾಡುವರೊ ಅವರೆಲ್ಲರಿಗೂ ಮದ್ಯವನ್ನು ಬಿಡಿಸುವ ಪ್ರಚಾರಕ ನಾನು—ಈಗ ನೀನೇನೋ ಕಲಿಯುಗದ ಸೋಮರಸ ಕುಡಿಯೋದು ಅಂತ ಮಾತ ನಾಡುತ್ತಿದ್ದೆಯಲ್ಲ—ಅದನ್ನು ಮರೆತು ಬಿಡು. ಈಗ ನಮ್ಮಲ್ಲಿ ಪೋಸ್ಟಲ್ ಡಿಪಾರ್ಟಮೆಂಟ್ ಸುರುವಾಗಿ ಯಜ್ಞದ ರನರ್ (Runner) ರೂಢಿ ಹೋಗಿ ಬಿಟ್ಟಿದೆ. ಇನ್ನು ಯಾರೂ ಯಜ್ಞ ಮಾಡೋದಿಲ್ಲ, ಸೋಮ ನೀಡೋದಿಲ್ಲ, ಕದ್ದು ಯಜ್ಞ ಮಾಡುವುದು ಹಿಂಸೆ, ಕದ್ದು ಸೋಮ ಕುಡಿಯೋದು ಅಸತ್ಯ; ನಮ್ಮಲ್ಲಿದೆ ಸತ್ಯ—ಅಹಿಂಸೆಗಳ ಕಾಲ. ಈ ಪ್ರಕಾರವಾಗಿ, ಹೇ ಮಹೇಂದ್ರನೆ, ಈ ಕಲಿಯುಗದಲ್ಲಿ ಹೇಳು ವಂಥಾದ್ದರಲ್ಲಿ ಬರುವುದಲ್ಲಾ—

ಇಂದ್ರ:—(ಹೌಹಾರಿದವನಂತೆ) ಏನು—ಏನು? ಭೂಮಿಯಲ್ಲಿ ಯಜ್ಞವೆ ಇಲ್ಲವೆ? ಸೋಮರಸದ ಸುದ್ದಿಯೆ ಇಲ್ಲವೆ? ಛೆ—ಎಂದಿಗೂ ಶಕ್ಯವಿಲ್ಲ.

ಭೂಮಿಗೆ ಬೇಕು ದೇವತೆಗಳು, ದೇವತೆಗಳಿಗೆ ಬೇಕು ಅನ್ನ—ಪಾನ
ಸುರರು ನಾವು, ನಾವು ಜೀವಿಸುವುದು ಸುರಾ—ಸೇವನದಿಂದಲೆ;
ಸುರೆ ಇಲ್ಲದಿದ್ದರೆ ನಮಗೆ ಜೀವವಿಲ್ಲ. ಮುಂದೆ ವಿಶ್ವದ ಗತಿ—

ಮರ್ತ್ಯ.— (ನಡುವೆಯೆ) ಒಮ್ಮೆಲೆ ತರ್ಕ—ಸಿದ್ಧಾಂತಗಳಿಗೆ ಜಿಗಿಯಬೇಡ. ವಿಶ್ವದ ಗತಿ ಹಾಳಾಯಿತು ಸುರೆ ಇಲ್ಲದಿದ್ದರೆ ಸಾಯುವೆ ಎಂದು ಹೆದರಬೇಡ. ಅಂತಹ ಪರಿಸ್ಥಿತಿ ಇದ್ದವರಿಗಾಗಿ ಸ್ಪೆಶಲ್ ಪರ್ಮಿಟ್ ಕೊಡುವೆವು. ಅದನ್ನೆ ಹೇಳಲು ಬಂದಿರುವೆ. ಆದರೆ ಎರಡು ಸಂಗತಿಗಳನ್ನು ಮಾತ್ರ ಲಕ್ಷ್ಯದಲ್ಲಿಡು. ಸ್ಪೆಶಲ್ ಪರ್ಮಿಟ್ ಬೇಕಾದರೆ ಮೆಡಿಕಲ್ ಸರ್ಟಿಫಿಕೇಟ ಬೇಕು. ಇದಲ್ಲದೆ ಕೃತಯುಗದ ಅದು, ತ್ರೇತಾಯುಗದ ಇದು—ಅಂತ ಏನೇನೊ ಮಾತಾಡುತ್ತಿದ್ದೆ. ಹಿಂದಿನ ಯಜ್ಞಗಳಿಂದ ನೀನು ಮದ್ಯವನ್ನು ಕೂಡಿಸಿಟ್ಟಂತೆ ಕಾಣುತ್ತದೆ. ಅದನ್ನು ಮೊದಲು ಮರ್ತ್ಯಲೋಕದ ಸರಕಾರಕ್ಕೆ ಒಪ್ಪಿಸು.

ಇಂದ್ರ:— (ಏನೂ ತಿಳಿಯದೆ) ಪರಮಿಟ್! ಸರಟೀಫಿಕೇಟ! ಸರಕಾರ ಏನಿದು? ನನಗೆ ನಿನ್ನ ಮಾತಿನ ಅರ್ಥವೆ ಆಗುವದಿಲ್ಲವಲ್ಲ?

ಮರ್ತ್ಯ:— ಹೇಗೆ ಆದೀತು ಅರ್ಥ? ಒಂದು ದಿವಸಲ್ಲ, ಒಂದು ವರ್ಷ ಅಲ್ಲ, ಯುಗಾನುಯುಗ ಒಂದೇಸವನೆ ಮದ್ಯ ಕುಡಿದಿರುವೆ. ಉಸಿರಾಡಿಸಿದರೆ ಮುಂದೆ ಹಾರಾಡುವ ನೊಣಕ್ಕೆ ಮದ ಏರಬಹುದು! ತಲೆಗೆ ತಿಳಿದುಕೊಳ್ಳುವಷ್ಟು ತ್ರಾಣ ಬೇಕಲ್ಲ? ಈಗ ಉಳಿದ ಎಲ್ಲ ದೇವತೆಗಳಿಗೂ ಹೇಳಿ ಬಂದೀನಿ. ನನ್ನ ಮಾತು ಕೇಳಿ ಅವರದೂ ಕೈಕಾಲು ಸತ್ತು ಹೋಗಿವೆ, ಮನೆ ಹಿಡಿದು ಕೂತಾರೆ. ಆದರೆ ಅವರಲ್ಲಿ ಕೂಡಿಸಿಟ್ಟ ಮದ ಇಲ್ಲ ನಿನ್ನಂತೆ. ನಿನ್ನ ಸಂಗ್ರಹ ನನ್ನ ಸಿಪಾಯಿಯರಿಗೆ ಒಪ್ಪಿಸು—ನಾನು ಹೇಳಿದ್ದು ತಿಳಿಯಲಿ ಬಿಡಲಿ—ನಾಳಿನಿಂದ ನಾಲಗೆ ಜಪ್ಪಿಸು.!
[ಗುಂ—ಎಂಬ ಸಪ್ಪಳ ಪ್ರಾರಂಭವಾಗಿ ಮರ್ತ್ಯನು ಮಾಯವಾಗುವನು.]

ಇಂದ್ರ:— (ಚಕಿತನಾಗಿ, ದಿಗ್ಭ್ರಾಂತನಾಗಿ ಕಣ್ಣೊರೆಸಿಕೊಳ್ಳುತ್ತ) ಏನಿದು? ಕನಸನ್ನು ಕಂಡೆನೆ ನಾನು? ಅಥವಾ ಬ್ರಹ್ಮಾದಿಗಳಿಗೆ ದ್ರೋಹ ಬಗೆದು ಹೆಮ್ಮೆ ಪಟ್ಟೆನೆಂದು ಮಾಯೆಯು ನನಗೆ ಬುದ್ಧಿಗಲಿಸಿದಳೊ?

ಅಥವಾ—[ 'ಮಹೇಂದ್ರಾ, ಮಹೇಂದ್ರಾ' ಎಂದು ಕಳ್ಳದನಿಯ ಕೂಗು ಕೇಳಿಸಲು ಅತ್ತಿತ್ತ ನೋಡುತ್ತ] ಯಾರು—ಯಾರು ?

[ ಮೆಲ್ಲಗೆ ಸಡೆಯುತ್ತ, ಅತ್ತಿತ್ತ ಹೆದರಿಕೆಯಿಂದ ನೋಡುತ್ತ, ಇಂದ್ರನಿಗೆ 'ಶಶ್' ಎಂದು ಸುಮ್ಮನಾಗಲು ಸನ್ನೆಮಾಡುತ್ತ ಕಳ್ಳದನಿಯಲ್ಲಿ] ಮಹೇಂದ್ರಾ ಮಹೇಂದ್ರಾ, ಅವನು ಹೋದನೆ ?

ಇಂದ್ರ.— [ನೋಡಿ] ಯಾರು ? ಅಗ್ನಿ ! ಹುತಾಶನ್ !

ಅಗ್ನಿ :— (ಕಳ್ಳದನಿಯಲ್ಲಿ) ಶಶ್ ! ನಾನೇ ಅಹುದು. ನನ್ನ ಹೆಸರನ್ನಾದರೂ ಗಟ್ಟಿಯಾಗಿ ಕೂಗಬೇಡ. ಅವನು ಹೋದನೇನು ?

ಇಂದ್ರ :— ಯಾರು (ನಗೆಯಿಂದ) ಓಹೊ ! ಮರ್ತ್ಯನೆಂದು ಹೇಳಿಕೊಳ್ಳುವ ಆ ಮರುಳನೊ ? ಅವನಿಗೇಕಿಷ್ಟು ಹೆದರುವೆ ?

ಅಗ್ನಿ :—ಮದ್ಯಸೇವನ ಮಾಡುವದಿಲ್ಲೆಂದು ವಚನ ಕೊಟ್ಟಿದ್ದೇನೆ ಅವನಿಗೆ. ನನ್ನಲ್ಲಿಯೂ ಸಂಗ್ರಹವಿಲ್ಲ. ಆದರೆ ನನ್ನ ಬಾಯಿ ಬತ್ತಿದೆ; ಕೈಕಾಲ್ಗಳು ಸೇದುತ್ತಲಿವೆ; ಕಣ್ಣುಗಳಲ್ಲಿ ಉರಿ ಎದ್ದಿದೆ. ಮೊದಲು ನಿನ್ನಲ್ಲಿದ್ದ ಸುರೆಯನ್ನಾಗಲಿ ಸೋಮವನ್ನಾಗಲಿ ಕೊಡು. ಆಮೇಲೆ ಮಾತ ನಾಡುವ ಶಕ್ತಿ ಬಂದೀತು ನನಗೆ. ( ಉಸುರ್ಗರೆಯುತ್ತ ಹತ್ತಿರದ ಆಸನದ ಮೇಲೆ ಕುಕ್ಕರಿಸುವನು. )

[ ಇಂದ್ರನು ಮಾಯವಾಗಿ ಕೆಲಹೊತ್ತಿನಲ್ಲಿ ಮತ್ತೆ ಕಾಣಿಸಿ ಭ್ರಾಂತಿಷ್ಟನಂತೆ ತಲೆಗೂದಲು ಕೆದರುತ್ತ, ಕಾಲು ಬಡಿಯುತ್ತ, ಚೀರುತ್ತ ]

ಇಂದ್ರ :—ಧಿಃಕಾರ—ಧಿಕ್ಕಾರವಿರಲಿ ಮಾನವಕುಲಕ್ಕೆ ! ನನ್ನ ಸಂಗ್ರಹವನ್ನು ಅಪಹರಿಸಿದ್ದಾರೆ ! ನನ್ನ ಸುರೆಯನ್ನು ಕದ್ದೊಯ್ದಿದ್ದಾರೆ ! ಫಡ ಫಡ ! ಒಂದು ಹನಿಯಾದರೂ ಉಳಿದಿದ್ದಾದರೆ ಐರಾವತನ ಸೊಂಡೆಯಿಂದ ಸವರಿ, ಐರಾವತನಲ್ಲಿ ಮದತುಂಬಿ ಮರ್ತ್ಯಕುಲವನ್ನು ಪಾದತಲದಲ್ಲಿ ಮೆಟ್ಟಿ ಪುಡಿ ಪುಡಿ ಮಾಡಲು ಅವನನ್ನು ನುಗ್ಗಿ ಬಿಡುತ್ತಿದ್ದೆ ! ಧಿಕ್ಕಾರ ಭೂಲೋಕಕ್ಕೆ ! ಸಾವಿರ ಶಾಪ ಮಾನವಕುಲಕ್ಕೆ ! ದೇವತೆಗಳಿಗೆ, ದೇವೇಂದ್ರನಾದ ನನಗೆ ಸಲ್ಲತಕ್ಕ ಸುರೆಯನ್ನು ತಪ್ಪಿಸಿದ್ದಕ್ಕಾಗಿ ಯಾವ ಯಾತನೆಯನ್ನು ಕಳುಹಲಿ ? ಆದರೆ ಮೊದಲು ಒಂದು

ಗುಟುಕಾದರೂ ಮದಿರೆ ಬೇಕು, ಒಂದು ಹನಿಯಾದರೂ ಬೇಕು. (ಚೀರುತ್ತ) ರಂಭೇ, ತಿಲೋತ್ತಮೇ, ಆಕೇ, ಈಕೆ, ಯಾರಾದರೊಬ್ಬರು ಬನ್ನಿ! ನಿಮ್ಮ ಅಧರಪಾನದಿಂದ ನಿಮ್ಮ ಅಧರಕ್ಕೆ ಗುಣವಾಗಿ, ರೂಢಿಯಾಗಿ ತಗುಲಿಕೊಂಡ ಮದಿರೆಯ ರುಚಿಯನ್ನು ನಾಲಗೆಯಿಂದ ಒಮ್ಮೆ ಸವರುವೆ. ಇದೊ! ಬೇಗ ಬನ್ನಿ. ನನ್ನ ಕಾಲ್ಗಳು ಕುಗ್ಗತೊಡಗಿದುವು, ನನ್ನ ಕಣ್ಣು ತಗ್ಗತೊಡಗಿದುವು; ಸುರೆ! ಸುರೆ! ಸುರರ ಜೀವನದ ಸುಧಾಸಾರ! ಅಮರರ ಜೀವನದ ಅಮೃತರಸ! (ಎನ್ನುತ್ತ ಆಸನದಲ್ಲಿ ಮುಗ್ಗರಿಸುವನು.)

['ಹಾಳಾಯಿತು ಸುರರ ಜೀವನ' ಎನ್ನುತ್ತ ಯಮನು ಶಕ್ತಿ ಕುಂದಿದ ವಾಯುವನ್ನು ಆಯಾಸದಿಂದ ಎಳೆದುಕೊಂಡು ಬರುವನು.]

ಯಮ :—ಹಾಳಾಯಿತು ಸುರರ ಜೀವನ! ಅಮರರಂತೆ! ಇದೊ, ನೋಡಿದಿರಾ ಈ ವಾಯುದೇವತೆಯನ್ನು? ಸುರೆ ಇಲ್ಲದ್ದಕ್ಕಾಗಿ ಯಮನಾದ ನನ್ನ ಲೋಕಕ್ಕೆ ಬಂದಿದ್ದಾನೆ! ದೇವೇಂದ್ರಾ, ಏಳು, ಶತಾಶನಂತೆ ತಲೆಹಿಡಿದುಕೊಂಡು ಕುಳಿತಿರುವೆ ಏಕೆ? ನಿನ್ನ ದೇವಲೋಕದ ಪ್ರಜೆಗಳೆಲ್ಲ ಹಿಂಡು ಹಿಂಡಾಗಿ ನನ್ನ ಲೋಕವನ್ನು ನುಗ್ಗುತ್ತಿದ್ದಾರೆ! ನಿನ್ನ ರಂಭೆ, ನಿನ್ನ ವಿಲಾಸದ ನಚ್ಚಿನ ರಂಭೆ, ಎಲುಬಿನ ಗೊಂಬೆಯಾಗಿ, ಬಿದುರಿನ ಬೆಚ್ಚಾಗಿ ನನ್ನ ಲೋಕದಲ್ಲಿದ್ದಾಳೆ! ಸುರೆಯ ಕ್ಷಾಮದಿಂದ ನಿನ್ನ ಪ್ರಜೆಗಳಲ್ಲಿ ಕ್ಷೋಭವೆದ್ದಾಗ ನೀನು ಕರ್ತವ್ಯಚ್ಯುತನಾದೆ! ನೋಡಿದೆಯಾ? ಸುರೆ ಇಲ್ಲದ್ದಕ್ಕಾಗಿ ನನ್ನ ಕೋಣನ ಬಣ್ಣ ಬದಲಾಗಿ ಸುಣ್ಣದಂತಾಗಿದೆ!

ವಾಯು :—(ದೀನವಾಣಿಯಿಂದ) ಭೋ ಮಘವನ್, ಬ್ರಹ್ಮಾದಿಗಳು ಕೂಡ ನಿನಗೇ ಮೊರೆ ಹೊಕ್ಕಿದ್ದಾರಂತೆ! ಹಾಗಿದ್ದರೆ ನಿನ್ನಲ್ಲಿ ಸುರಾಸಂಗ್ರಹ ವಿದ್ದಿರಬೇಕು. ದಯವಿಟ್ಟು, ಒಂದು ಹನಿಯನ್ನು ಈ ವಾಯುವಿನ ಗಂಟಲಲ್ಲಿ ಹರಿಬಿಡು. ಕೊನೆಗೆ ನೀನೇ ಸುರೆಯನ್ನು ಸೇವಿಸುವ ಹಟವಿದ್ದರೆ, ಕುಡಿದ ಮೇಲೆ ನನ್ನ ಕಂಠದಲ್ಲಿ ಉಫ್ ಎಂದು ಉಸಿರು ಬಿಡು! ನನ್ನ ಜೀವ ಹರಿದಾಡಲಿ!

ಯಮ :—(ಅಗ್ನಿಯನ್ನು ನೋಡಿ) ಯಾರು? ಅಗ್ನಿ? ಹುತಾವಹಾ, ನೀನೂ ಹತಾಶನಂತೆ ಹಾಸಿಗೆ ಹಿಡಿದಿರುವೆಯಾ?

ಅಗ್ನಿ :—(ಅಳುದನಿಯಲ್ಲಿ) ನನ್ನ ಕಂಠದಲ್ಲಿ ದಾಹ ತಡೆಯದಾಗಿದೆ, ಏನು ಮಾಡಲಿ?

ಯಮ :—ಏನು ಮಾಡಲಿ! ಸರ್ವಭಕ್ಷಕನಾದ ನೀನು ಸ್ವಂತದ ಹಲ್ಲನ್ನು ತಿನ್ನುತ್ತ ಕುಳಿತಿರುವೆಯಾ?

(ಒಳಗಿನಿಂದ "ಭೋ ಮಹೇಂದ್ರಾ ನಿನಗೆ ವಿಜಯವಾಗಲಿ" ಎಂಬ ದನಿ)

ಇಂದ್ರ:— (ಚಟ್ಟನೆ ಸಿಡಿದೆದ್ದು) ಯಾರು? ಓಹೊ ಋಷಿವರ್ಯರು! ಅಗ್ನಿಯೇ, ವಾಯೋ, ಯಮಧರ್ಮಾ—ತಡೆಯಿರಿ. ಋಷಿವರ್ಯರು ಮಾನವ ಲೋಕವನ್ನು ಸಂಚರಿಸಿ ಬಂದಿರಬೇಕು ಅವರ ಸಲಹೆಯನ್ನು ಕೇಳಿ ಅದರಂತೆ ನಡೆಯೋಣ. ನಮೋ ಭಗವತ್ರೇ.

(ಋಷಿವರ್ಯನನ್ನು ಎಲ್ಲರೂ ಎದ್ದು ಸತ್ಕರಿಸಿ ಅಗ್ರಾಸನದಲ್ಲಿ ಕುಳ್ಳಿರಿಸುವರು ಋಷಿಯು ಕೈಯಲ್ಲಿ ಸೋಮಪಾತ್ರೆಯನ್ನು ತಂದಿದ್ದಾನೆ. ಅವರೊಳಗಿನ ಸೋಮವನ್ನು ಕುಡಿಯುವಾಗ ನಾಲ್ವ ದೇವತೆಗಳ ನಾಲಗೆಯಿಂದ ನೀರಧಾರೆ ಹರಿಯುವುದು.)

ಋಷಿ :— (ಅವರನ್ನು ನೋಡಿ) ಇದೇನು? ನನ್ನ ಆಗಮನದಿಂದ ಆನಂದಾಶ್ರುಗಳು ನಿಮ್ಮ ಕಣ್ಣು ತುಂಬಿ ತುಳುಕಿ ಕೊನೆಗೆ ಬಾಯಿಯಿಂದ ಹೊರ ಬೀಳುತ್ತವೆಯೊ ಏನು?

ಇಂದ್ರ :—(ನೀರು ತುಂಬಿದ ಬಾಯಿಂದ) ನಿಮ್ಮ ಕೈ ಋಳಗ—

ಅಗ್ನಿ :—( ,, ,, ,, ) ಸೋಮ - ಸಸ್—

ವಾಯು :—( ,, ,, ,, )—ರಸ——ಸ್ ಸ್—

ಯಮ :—(ನಾಲಗೆ ಸವರುತ್ತ) ಅಹುದ್—ಸ್ ಸ್—ಏನೂ ಅಂತ—ಸ್ ಸ್

ಇಂದ್ರ :—(ಅಗ್ನಿಯನ್ನು ನೋಡುತ್ತ) ಋಷಿವರ್ಯರು ಅತ್ಯಂತ ಯಜ್ಞನಿಷ್ಠರು—

ವಾಯು :—(ಗಾಂಭೀರ್ಯದ ದನಿಯಲ್ಲಿ) ನಮಗೆ ಹೇಳಬೇಕೆ? ಇಂತಹ ಸೋಮಯಾಜಿಗಳು—

ಯಮ :—(ನಡುವೆಯೆ)— ಮತ್ತು ಧರ್ಮನಿಷ್ಠರು—

ಅಗ್ನಿ :—ಧರ್ಮನಿಷ್ಠರೆಂದೇ ದೇವತಾಂಶ ಸೋಮವನ್ನು ನೀಡಲು ಇಲ್ಲಿಯವರೆಗೆ ಬಂದಿದ್ದಾರೆ—

[ ಋಷಿಯು ಪೆಚ್ಚಾದವನಂತೆ ಮಾತನಾಡುವ ಒಬ್ಬೊಬ್ಬರನ್ನು ದಿಟ್ಟಿಸುವನು ]

ಇಂದ್ರ:—ಯಜ್ಞದ ದೇವತೆ ಯಾರೇ ಇದ್ದರೂ ಋಷಿವರ್ಯರ ಧರ್ಮನಿಷ್ಠೆಗೆ ನಾವೆಲ್ಲರೂ ಮೆಚ್ಚಿದೆವೆಂದು ತೋರಿಸಲು ಎಲ್ಲರೂ ಭಾಗವನ್ನು ವಹಿಸೋಣ. ಸ್ವಾಹಾ—(ಎನುತ್ತ ಮುಂದೆ ಬರಲು ಋಷಿಯು ಎದ್ದು ನಿಲ್ಲುವನು)

ವಾಯು :— ಅಥವಾ ಸವಿತೃವು ದೇವತೆಯಾಗಿರಬಹುದು. ಹಾಗಿದ್ದರೆ ಅವನ ರಥವಾಹಕನಾದ ನಮಗೆ ಒಪ್ಪಿಸಬಹುದು— (ಎನುತ್ತ ಮುಂದೆ ಬರಲು ಋಷಿಯು ಸೋಮಪಾತ್ರೆ ಹಿಡಿದ ಕೈಯನ್ನು ಮೇಲೆತ್ತಿ ಹಿಡಿಯುವನು)

ಅಗ್ನಿ:—( ಹಿರಿತನದ ದನಿಯಲ್ಲಿ ಇಂದ್ರ ...ವಾಯುಗಳನ್ನುದ್ದೇಶಿಸಿ) ಋಷಿವರ್ಯರು-ಧರ್ಮನಿಷ್ಠರೆಂದು ಹೇಳುವಿರಿ ಅದಕ್ಕಾಗಿಯೆ ಅವರು ಪ್ರಥಮಾವ್ಹಾನದ ದೇವತೆಯಾದ ನನಗೆ ಅದನ್ನು— (ಎನ್ನುತ್ತ ಮುಂದೆ ಬರಲು ಋಷಿಯು ಟಣ್ಣನೆ ಜಿಗಿದು ಆಸನದ ಮೇಲೆ ನಿಂತುಕೊಳ್ಳುವನು)

ಯಮ :— (ಎಲ್ಲ ಸೂಕ್ಷ್ಮವನ್ನೂ ಅರಿತವನಂತೆ) ಓಹೋ! ನನಗೆ ಅರ್ಥವಾಯಿತು. ಪಿತೃಗಳಿಗಾಗಿ ತಂದ ಸೋಮವಿದು. ಋಷಿವರ್ಯಾ, ಪಿತೃಗಳು ನನ್ನ ಲೋಕದಲ್ಲಿ ಕ್ಷೇಮದಿಂದಿದ್ದಾರೆ. ನಾನು ಮುಟ್ಟಿಸುವೆ ಅವರಿಗೆ. ನೀಡು— (ಎನುತ್ತ ಮುಂದೆ ಬರಲು ಋಷಿಯು ಹಿಂದೆ ಸರಿಯಲು ಹೋಗಿ ಮುಗ್ಗರಿಸಿ ಬೀಳುವನು, ಸೋಮವು ಚೆಲ್ಲುವುದು, ಕೂಡಲೆ ಆನಂದದ ಹುಂಕಾರದಿಂದ ನಾಲ್ಕೂ ದೇವತೆಗಳು ಅಡ್ಡಬಿದ್ದು ನೆಲಕ್ಕೆ ನಾಲಗೆ ಚಾಚುವರು )

ಋಷಿ :— (ಗದ್ದರಿಸುತ್ತ) ಹಾಂ, ಉತ್ತಿಷ್ಠತ! ಜಾಗ್ರತ! ಇಲ್ಲವಾದರೆ ಶಾಪಾನ್ ನಿಬೋಧತ! (ಎಂದು ಕೈ ಎತ್ತಲು ಅನಿಚ್ಛೆಯಿಂದ ಅನಿವಾರ್ಯವಾಗಿ ನಾಲ್ಕೂ ದೇವತೆಗಳು ಎದ್ದು ನಿಲ್ಲುವರು)

ಋಷಿ —(ಕೆಳಗೆ ಕುಳಿತು ನೆಲದಿಂದ ಸವರಿದ ಸೋಮವನ್ನು ಪಾತ್ರೆಯಲ್ಲಿ ಸುರಿಯುತ್ತ) ಸುರಶ್ರೇಷ್ಠರೇ, ಕೇಳುವಂತಹರಾಗಿರಿ. ಈ ಸೋಮ ಯಾರ ಭಾಗವೂ ಅಲ್ಲ, ನನ್ನದು; ಕೇವಲ ನನ್ನದು. ಸಂಸಾರ ಬಿಟ್ಟದ್ದರಿಂದ ಮಾನವ ನಾನಲ್ಲ, ಸ್ವರ್ಗವಾಸಿಯಾದ ದೇವತೆಯೂ ನಾನಲ್ಲ; ಅಂತಹ ನನ್ನದು ಈ ಸೋಮ. ಮಾನವಲೋಕದಲ್ಲಿ ಈಗ ಸೋಮ ದೊರೆಯುವಂತಿಲ್ಲ, ಅದಕಾಗಿ ಸ್ವರ್ಗದ ಜಕಾತನಾಕೆಯುವರಂತಿದ್ದ ನಿಮಗೆ ಇನ್ನು ಮುಂದೆ ಸೋಮ ಸಿಕ್ಕುವಂತಿಲ್ಲ. ನಾನು ಋಷಿ, ತಪೋಧನ, ಬ್ರಹ್ಮತೇಜಸ್ಸಿನ ಬಲಿಷ್ಠ. ನನಗೆ ಸೋಮ ಕುಡಿಯುವ ಆಸೆ ಇಲ್ಲ, ಕುಡಿದ ಸೋಮ ಏರೀತೆಂಬ ಹೆದರಿಕೆ ಇಲ್ಲ.

ಇಂದ್ರ :— (ನಮ್ರನಂತೆ) ಋಷಿವರ್ಯಾ, ಅಪರಾಧವನ್ನು ಮಾಡಿದ ಈ ಪಾಕ ಶಾಸನಿಯನ್ನು ನಿನ್ನ **ಕೈಯಿಂದ ಮುಟ್ಟಿ** ಕ್ಷಮಿಸು.

ಅಗ್ನಿ :— (ನಮ್ರನಂತೆ) ಅಧರ್ಮದ ಮಾತುಗಳನ್ನಾಡಿದ ಈ ವಹ್ನಿಯ ನಾಲಗೆ ಯನ್ನು **ಕೈ ಮುಟ್ಟಿ** ಕೀಳು.

ವಾಯು :— (ನಮ್ರನಂತೆ) ತಿಳಿಯದೆ ಮಾಡಿದ ತಪ್ಪಿಗಾಗಿ ಈ ಅನಿಲನ ಕಿವಿ ಯನ್ನು **ಕೈಮುಟ್ಟಿ** ಹಿಂಡು.

ಯಮ :— (ನಮ್ರನಂತೆ) ಹುಡುಗಾಟದ ಹುಂಬತನಕ್ಕಾಗಿ ಈ ಯಮನಿಗೆ **ಕೈಮುಟ್ಟಿ** ಅಭಯವನ್ನು ಕೊಡು.

ಋಷಿ :— ದೇವತೆಯರಿರಾ, ನಿಮ್ಮ ವಿನಯಕ್ಕೆ ನಾನು— (ಎಂದು ಕೈ ಎತ್ತುವಾಗ ಏನೊ ಹೊಳೆದು, ನಕ್ಕು, ಎತ್ತಿದ ಕೈಯನ್ನು ನೋಡಿಕೊಳ್ಳುತ್ತ) ಓಹೋ ! ಇದೋ ! ಇದೊ ನಿಮ್ಮ ವಿನಯದ ರಹಸ್ಯ ? ನನ್ನ ಕೈಗೆ ಸೋಮರಸ ಹತ್ತಿದ್ದರಿಂದ ನಿಮಗೆ ನಾನು **ಕೈಮುಟ್ಟಿ** ಆಶೀರ್ವಾದ ಕೊಡಬೇಕೆಂಬ ಹಂಚಿಕೆಯೆ ?

ಇಂದ್ರ :— (ತಲೆ ತಗ್ಗಿಸಿ) ಋಷಿವರ್ಯರೆ, ಇನ್ನು ತಡೆಯುವುದೆಷ್ಟು ? ಬಚ್ಚಿಡು ವುದಾದರೂ ಯಾಕೆ ?

ವಾಯು :— (ತಲೆತಗ್ಗಿಸಿ) ನಮ್ಮ ದುಃಸ್ಥಿತಿಯನ್ನು ನೀವು ಸಾಕ್ಷಾತ್ತಾಗಿ ಕಂಡಿರುವಿರಿ.

K 2 . . .

ಅಗ್ನಿ:— (ತಲೆ ತಗ್ಗಿಸಿ) ಸುರೆ ಇಲ್ಲದ್ದಕ್ಕಾಗಿ ನಮ್ಮ ಪೌರುಷದಂತಿದ್ದ ಸುರತ್ವ ನಷ್ಟವಾದುದನ್ನು ನೋಡಿರುವಿರಿ.

ಯಮ :— (ತಲೆ ತಗ್ಗಿಸಿ) ಈ ದುಃಸ್ಥಿತಿಯಲ್ಲಿ ನಮಗಾಗಿ ಒಂದು ತರುಣೋಪಾಯವನ್ನು ಯೋಚಿಸಿಕೊಡಿರಿ.

ಋಷಿ :— (ಸಾವಕಾಶವಾಗಿ) ಹಂ—ಚಿ—ಕೆ ಇ—ದೆ.

ವಾಯು :— (ತವಕದಿಂದ) ಹೇಳಿರಿ—

ಇಂದ್ರ :— (ಋಕ್ಷವರಿಗೆ) ಸುಮ್ಮನಿದ್ದು ಕೇಳಿರಿ—

ಅಗ್ನಿ:— ಶ—ತಾಳಿರಿ—

ಯಮ :—(ಋಷಿಗೆ) ಚಿರಾಯು ಬಾಳಿರಿ—

ಋಷಿ :— ಸುರಲೋಕವನ್ನು ಸಂಹರಿಸಿ ಮಾನವರಾಗಿ ಅವತರಿಸಿ.
(ಎಲ್ಲರೂ ಬೆಪ್ಪಾಗಿ ನಿಲ್ಲಲು— ಹಹಹಹ— ಎಂದು ನಗುತ್ತ ಸೋಮವನ್ನು ಗುಟಕರಿಸುತ್ತ ಹೋಗುವನು)

( ಕೆಲಹೊತ್ತು ನಿಃಶಬ್ದತೆ )

ಇಂದ್ರ:—(ಕನಸಿನಲ್ಲಿಯಂತೆ) ಸುರಲೋಕವನ್ನು -

ಅಗ್ನಿ :— ( ,, ) .... .... .... .... ....ಸಂಹರಿಸಿ—

ಯಮ :— ( ,, ) .... .... .... ....ಮಾನವರಿಗಾಗಿ—

ವಾಯು :— ( ,, ) .... .... ....ಅವತರಿಸಬೇಕಂತೆ! —

ಇಂದ್ರ :— (ಒಮ್ಮೆಲೆ ಕನಲಿ) ಉದ್ಧಟ! ಉನ್ಮತ್ತ !

ಅಗ್ನಿ :— ಯಾವನೊ ಮಾನವನೇ ನಮ್ಮನ್ನು ಅವಮಾನಗೊಳಿಸುವುದಕ್ಕೆ ಋಷಿಯ ವೇಷದಿಂದ ಬಂದಿರಬಹುದು.

ವಾಯು :— ನನಗೆ—ವಾಯುದೇವತೆಗೆ—ಅವಮಾನ! ನನ್ನ ರಭಸದಿಂದ ಇಡಿಯ ಮಾನವಪ್ರಪಂಚವನ್ನೆ ನೆಲೆ ಇಲ್ಲದೆ ಹಾರಿಸಿಬಿಡುವೆ.

ಯಮ :— (ಆವೇಶದಿಂದ) ನನ್ನ ಪಾಶದಿಂದ ಏಕಕಾಲಕ್ಕೆ ಇಡಿಯ ಭೂಲೋಕವನ್ನೆ ಹೆಡಮುರಿಗೆಯಿಂದ ಬಿಗಿಯುವೆ.

ಅಗ್ನಿ :— (ಬುಸುಗುಡುತ್ತ) ಧಗಧಗಿಸುವ ನನ್ನ ಜ್ವಾಲಾಜಿಹ್ವೆಯಿಂದ ಸಕಲ ಸಂಸಾರಗಳನ್ನು ಸುಟ್ಟುಬಿಡುವೆ.

ಇಂದ್ರ :—(ಹೆಮ್ಮೆಯಿಂದ ಅವರೆಲ್ಲರನ್ನೂ ನೋಡುತ್ತ) ಭಲೆ! ಇದೀಗ ದೇವತೆಗಳ

ದೇವತ್ವ! ಅಮರಾವತೀವೀರರ ಅಮರತ್ವ! ಏಳಿರಿ. ಕ್ಷುದ್ರ ಮಾನವರಿಗೆ ಹೆದರುವೆವೆ ನಾವು? ಇದೆಲ್ಲಿಯ ಮತಿಭ್ರಾಂತಿಯಾಗಿದೆ ನಮಗೆ? ನಾವು 'ಹುಂ' ಎಂದಾಗ ಹುಟ್ಟಿ, 'ವುಫ್' ಎಂದಾಗ ಉದುರಿ ಹೋಗುವ ಕ್ಷಣಿಕ ಮರ್ತ್ಯನಿಗೆ ನಾವು ಹೆದರಬೇಕೆಂದರೆ? ನಮಗೆ ಕೂಡ ಸುರೆಯನ್ನು ದೊರಕಿಸಿಕೊಡುವುದಿಲ್ಲವಂತೆ! ಅಜ್ಞಾನಿಗಳ ಅಹಂಕಾರ! ಮಿಕ್ಕಿದ ಸೊಕ್ಕು! (ಒಮ್ಮೆಲೆ ಚಪ್ಪಾಳೆ ತಟ್ಟಿ) ಹಂ—ನನ್ನ ನಚ್ಚಿನ ನಾಕನಿವಾಸಿಗಳೆ, ಸ್ವರ್ಗದ ಸಹವಾಸಿಗಳೆ, ನನಗೊಂದು ಹಂಚಿಕೆ ಹೊಳೆದಿದೆ! ಈ ಮರುಳ ಮಾನವನಿಗೆ ಚೆನ್ನಾಗಿ ಬುದ್ಧಿ ಕಲಿಸೋಣ. ನಮ್ಮನ್ನು ಎದುರಿಸುವುದೆಂದರೆ ತನ್ನ ವಿನಾಶ ಎಂದು ತೋರಿಸಿಕೊಡೋಣ. ನಮ್ಮ ಸಹಾಯ ಸಂರಕ್ಷಣೆಗಳಿಲ್ಲದೆ ಅವರಿಗೆ ಜೀವಿಸುವುದೆ ಶಕ್ಯವಿಲ್ಲೆಂದು ಸಿದ್ಧ ಮಾಡಿ ಬಿಡೋಣ....ಇದೋ! ನಾವು ದಿಕ್ಪಾಲಕರಲ್ಲವೆ? ಇದಲ್ಲದೆ, ಭೂಲೋಕದ ವಾತಾವರಣ ಅಧಿಷ್ಠಾನ ದೇವತೆಗಳಲ್ಲವೆ? ಏಕಕಾಲಕ್ಕೆ ನಾವೆಲ್ಲರೂ ನಮ್ಮ ಸಹಕಾರವನ್ನು ತಡೆಯೋಣ. ನಾನು ಭೂಲೋಕಕ್ಕೆ ಪರ್ಜನ್ಯವೃಷ್ಟಿಯನ್ನು ಸುರಿಸುವುದಿಲ್ಲ —

ಅಗ್ನಿ :— ನಾನು ಮಾನವನ ಅನ್ನವನ್ನು ಕುದಿಸುವುದಿಲ್ಲ, ಚಳಿಯನ್ನು ಬಿಡಿಸುವುದಿಲ್ಲ—

ವಾಯು :— ಉಣ್ಣುವುದಂತೂ ಉಳಿಯಲಿ, ಉಸಿರಾಡಿಸಲು ಹವೆಯನ್ನು ಕೂಡ ನಾನು ಬೀಸುವುದಿಲ್ಲ—

ಯಮ:—ಹವೆಯ ಮಾತೇಕೆ?—ಉಸಿರಾಡಿಸಲು ಅವಕಾಶವನ್ನೆ ಕೊಡದಂತೆ ನನ್ನ ದೂತರ ದಾಳಿ ಬಿಡುವೆ.

ಇಂದ್ರ:—(ಹೆಮ್ಮೆಯ ದನಿಯಲ್ಲಿ) ಹೀಗೆ ಅಸಹಕಾರ ಹೂಡಿದೆವೆಂದರೆ—

ಅಗ್ನಿ :— ಹೊಟ್ಟೆಯ ಆಹಾರ ತಡೆದೆವೆಂದರೆ—

ವಾಯು :— ಹೃದಯದ ಹಾರಾಟ ಹಿಡಿದೆವೆಂದರೆ—

ಯಮ :— (ಎಲ್ಲರೂ ಪರಸ್ಪರ ಕೈ ತಟ್ಟುತ್ತ) ಜೀವ ಹೊಡೆದೆವೆಂದರೆ—

[ ಹಹಹ ಎಂದು ಎಲ್ಲರೂ ಗಟ್ಟಿಯಾಗಿ ನಗುವರು. ಇಷ್ಟರಲ್ಲಿ ಹೊರಗಿನಿಂದ ಯಾರೊ ಗಟ್ಟಿಯಾಗಿ ನಗುವ ಶಬ್ದವನ್ನು ಕೇಳಿ ನಾಲ್ವರೂ ಚಕಿತರಾಗಿ ತಡೆಯುವರು. ಹೊರಗಿನ ನಗೆ ಸಮೀಪ ಬರದಂತೆ ಹೆಚ್ಚಾಗಲು— ]

ಇಂದ್ರ:—(ಸಿಟ್ಟಿನಿಂದ) ಯಾರವರು? (ಎಂದು ಗದ್ದರಿಸುವನು)

[ಹೊಟ್ಟೆ ಹೊಟ್ಟೆ ಬಡಿದುಕೊಂಡು ನಗುತ್ತ ಮರ್ತ್ಯಜೀವಿಯು ಬರುವನು ಬಂದು ನಿಂತು ಒಬ್ಬೊಬ್ಬರನ್ನು ನೋಡುತ್ತ ಹೆಚ್ಚೆಚ್ಚಾಗಿ ನಗುವನು. ಕ್ರಮೇಣ ದಣಿದು ನಗೆಯ ಅಬ್ಬರವನ್ನು ತಡೆಯುತ್ತಲೆ]

ಮರ್ತ್ಯ:— ಪರ್ಜನ್ಯವೃಷ್ಟಿ— ಆಂ— (ಇಂದ್ರನನ್ನು ತಿವಿಯುವನು) ಆಹಾರ— ಆಂ— (ಅಗ್ನಿಯನ್ನು ತಿವಿಯುವನು) ಹವಾ—ಆ— ಆಂ— (ವಾಯುವನು ತಿವಿಯುವನು)ಜೀ— ವ— ಆ—ಆ— (ಎಂದು ಯಮನನ್ನು ತಿವಿದು).... ಚುಚುಚುಚೂ—ನೀವು ಬೇಕಾದಲ್ಲಿ ಮಾತಾಡಿದರೂ ನನಗೆ ಕೇಳಿಸೋದು ಎಂದು ಹೇಳಿದೆನಲ್ಲ—ನಿಮ್ಮೆಲ್ಲರ ಹಂಚಿಕೆ—ಹುಡುಗಾಟ ತಿಳಿವದೆ ನನಗೆ! ನಿಮ್ಮನ್ನು ಉಳಿಸಬೇಕು ಎಂಬ ಸದ್ವಿಚಾರದಿಂದ ಬಂದಿರುವೆ. ಹೇಳಿರಿ....ಶರಣಾಗತರಾಗುವಿರಾ—?

ಇಂದ್ರ:— ಮೂರ್ಖ!

ಅಗ್ನಿ:— ಮದಾಂಧ!

ವಾಯು:— ಕ್ಷುದ್ರ!

ಮರ್ತ್ಯ:— ನಿಂನಿಮ್ಮ ಹೆಸರನ್ನು ಹೇಳಿದಿರಾ? ಆಗಲಿ—ಗೊತ್ತಾಯಿತು. ಈಗಲಾದರೂ ಹೇಳಿರಿ—ಶರಣಾಗತರಾದರೆ ನಿಮ್ಮನ್ನು ಉಳಿಸುವೆ.

ನಾಲ್ವರೂ:.... (ರಭಸದಿಂದ) ಎಲಾ ಮಾನವರಾಕ್ಷಸಾ— (ಎಂದು ಏಕಕಾಲಕ್ಕೆ ನುಗ್ಗಿ ಒಬ್ಬರೊಬ್ಬರನ್ನು ನೋಡಿ ತಡೆಯುವರು)

ಮರ್ತ್ಯ:— [ಎದೆ ಸೆಟೆಸಿ] ನಾನು ಮಾನವನೂ ಅಹುದು, ರಾಕ್ಷಸನೂ ಅಹುದು. ಯಾಕೆಂದರೆ ನನಗೆ ಮಾಯಾಶಕ್ತಿ ಇದೆ. ಇಂದಿನ ಮಾನವನಿಗೆ ಮಾಯಾ-ಶಕ್ತಿ ಇದೆ ಎಂದೇ ನಿಮ್ಮ ಅಹಂಕಾರ ನಿಶ್ಚಯವನ್ನು ಕೇಳಿ ನಗೆಬಂದಿತು ನನಗೆ. [ಇಂದ್ರನಿಗೆ] ಪರ್ಜನ್ಯವೃಷ್ಟಿಯನ್ನು ತಡೆಯುವ ವೃತ್ರಘಾತುಕ ವೀರ ನೀನಲ್ಲವೆ? ಆದರೆ ಆ ಪರ್ಜನ್ಯ ತಡೆದರೆ, ನಿನಗೆಯೆ ಅಜೀರ್ಣವಾಗಿ ಹೊಟ್ಟೆ ಗುಡುಗುಡು ಸದ್ದು ಮಾಡೀತಲ್ಲದೆ ಮಾನವನಿಗೆ ಹೆದರಿಕೆ ಇಲ್ಲ. ಯಾಂತ್ರಿಕ ಮಾಯೆ ಇದೆ. (ಅಗ್ನಿಗೆ) ಅನ್ನವನ್ನು ಕೊಡಬಾರದೆಂದು ನಿನ್ನ ಪ್ರತಿಜ್ಞೆ. ಹ ಹ! ಅನ್ನದ ಹೆದರಿಕೆ ಯಾವ ಮಾನವನಿಗೆ? ಇದಲ್ಲದೆ

ಇತ್ತೀಚೆಗೆ ತ್ತಲಾಗಿ ಉಪವಾಸ ಮಾಡುವ ರೂಢಿಯೆ ಭೂಲೋಕದಲ್ಲಿ ಹೆಚ್ಚಾಗಿದೆ. ಬೆಂಕಿಯಲ್ಲಿ ಬೆಂದ ಅನ್ನ ಯಾರು ತಿನ್ನುವರೀಗ? ಹಸಿವೆ ಹಿಂಗುವ ಮಾಲ್ಟ್ (malt) ಇದೆ, ಮಾತ್ರೆಗಳಿವೆ! (ವಾಯು ಯಮರಿಗೆ] ನಿಮ್ಮ ಬೆದರಿಕೆಯೂ ಬರಿ ಬಾಯಿಬುರಗಿನ ಬೂಟಾಟಿಕೆ! ನೀವೆಲ್ಲರೂ ಮಾನವನ ಕಿರುಬೆರಳಿನ ವಶವಾಗಿದ್ದೀರಿ. ಬಟನ್ ಒತ್ತಿದರೆ ಸಾಕು, ಮಳೆ ಬೀಳುವುದು, ಒಲೆಹೊತ್ತುವುದು, ಗಾಳಿ ಬೀಸುವುದು, ಜೀವ ಹಾರುವುದು!

**ಇಂದ್ರ**:—(ಸಂಶಯದಿಂದ) ಅಂತೂ ಇಂದಿನ ಮಾನವರಿಗೆ ನಮ್ಮ— ದೇವತೆಗಳ— ಅಗತ್ಯವೇ ಇಲ್ಲ?

**ಮರ್ತ್ಯ**:— ಹಾಂ — ಜಾಣ! — ಮಾತಿನ ಮರ್ಮ ತಿಳಿದುಕೊಂಡೆ ನೋಡು.

**ಅಗ್ನಿ**:— ಉಂ— (ಎಂದು ಬೆಮರೊರಸಿಕೊಳ್ಳುವನು.)

**ವಾಯು**:— ಉಶ್ —(ಎಂದು ಗಾಳಿ ಹಾಕಿಕೊಳ್ಳುವನು.)

**ಯಮ**:— ಅಯ್ಯೋ! (ಎಂದು ಮೂರ್ಚ್ಛೆ ಹೋಗುವನು.)

**ಮರ್ತ್ಯ**:—ಅದಕಾಗಿಯೆ ಹೇಳಿದೆ. ನನಗೆ ಶರಣೆನ್ನಿರಿ—ನಿಮಗೆ ಸುರೆಯನ್ನು ದೊರಕಿಸಿಕೊಡುವೆ.

**ಇಂದ್ರ**:—(ಆನಂದದಿಂದ) ಸುರೆಯನ್ನು!

**ಅಗ್ನಿ**:—ಶರಣು!

**ವಾಯು**:—ಶರಣು!

**ಯಮ**:—ಶರಣು!

**ಇಂದ್ರ**:—(ಸಂಶಯದಿಂದ) ಶರಣು ಬರುವುದೆಂದರೆ—?

**ಮರ್ತ್ಯ**:—(ನಡುವೆಯೆ) ವಿಶೇಷವೇನೂ ಇಲ್ಲ. ನನ್ನ ಜೊತೆಯಲ್ಲಿ ಬರಬೇಕು. ಹಗ್ಗ ಕಟ್ಟಿಯಾಗಲಿ, ಗಾಡಿಯಲ್ಲಿ ಎಳೆದಾಗಲಿ ನಿಮ್ಮ ಸರ್ಕಸ್ ಹೂಡುವೆ, ಧನಸಂಪಾದನೆ ಮಾಡುವೆ. ನಮ್ಮಂತಹರಿಗೆ ನೋಕರಿ ಸಿಕ್ಕುವ ಪರಿಸ್ಥಿತಿ ಇಲ್ಲ.

**ನಾಲ್ವರೂ**:—(ಒಂದು ಕ್ಷಣ ಪರಸ್ಪರರನ್ನೂ ನೋಡಿ, ಕೈ ಎತ್ತಿ, ಗಟ್ಟಿಯಾಗಿ,) ತಥಾಸ್ತು—

ಮರ್ತ್ಯ:—ನಡೆಯಿರಿ ಹಾಗಾದರೆ—

ನಾಲ್ವರೂ:—ಆದರೆ—ಸುರಾಸೇವನ—

ಮರ್ತ್ಯ:—(ನಕ್ಕು) ಅಯ್ಯೋ ಮರುಳ ಮಹೇಂದ್ರಾ! ಮನೆ-ಹಿತ್ತಲವಲ್ಲಿಯೆ ಕಲ್ಪವೃಕ್ಷವಿದೆ. ಅದರ ಕೆಳಗೆ ನಿಂತು—ಹ ಹ! ನಿನಗೆ ಹೊಳೆದಿರಲಿಲ್ಲವಲ್ಲ ಈ ಯುಕ್ತಿ!

ಇಂದ್ರ:—ಆದರೆ—ನೀನು—? ಮದ್ಯಪಾನ ಪ್ರಚಾರಕ—?

ಮರ್ತ್ಯ:—(ನಕ್ಕು) ಅದಕ್ಕೇ ಹೇಳಿದೆ ಮಾನವಶಕ್ತಿ ಇಂದು ಅಗಾಧವಿದೆ ಎಂದು.

ಇಂದ್ರ:—(ಲಗುಬಗೆಯಿಂದ) ಭೋ ಬ್ರಹ್ಮ-ವಿಷ್ಣು-ಮಹೇಶಾದಿಗಳೆ, ಇದೊ ಇಂದ್ರನು ಸುರಾಪುನರುತ್ಥಾಪನೆಯನ್ನು ಮಾಡಿದ್ದಾನೆ-ಬನ್ನಿ-ಏಳಿ- [ಎಂದು ಅತ್ತಿತ್ತ ಸುಳಿದಾಡುತ್ತ ಎಲ್ಲರನ್ನು ಕಲೆಹಾಕುವವನಂತೆ ತ್ವರಿತದಿಂದ ಮಿಕ್ಕ ಮುವ್ವರನ್ನು ನೂಕುತ್ತ ಓಡಿ ಹೋಗುವನು.]

ಮರ್ತ್ಯ:—(ದಿಟ್ಟಿಸಿ ನೋಡಿ) 'ಇಂದ್ರನು ಸುರಾಪುನರುತ್ಥಾಪನೆ—' ಅಬ್ಬ! ಅದೆಂತಹ ಅಹಂಕಾರ! ಅದಕಾಗಿಯೆ ಈ ಸುರರಿಗೆ ಇಂದು ಉಪಸಂಹಾರ. [ಗುಂ—ಎಂಬ ಘುಮುಘುಮಿಸುವ ಸದ್ದಿನೊಡನೆ ಮಾಯವಾಗುವನು. ಎಲ್ಲವೂ ಕತ್ತಲೆಯಾಗುವದು. ಕ್ರಮೇಣ ಬೆಳಕು ಮೂಡಲು—ರಂಗಭೂಮಿಯ ನಟ್ಟ ನಡುವೆ ಮೊದಲನೆಯ ದೃಶ್ಯದಲ್ಲಿ ತೋರಿಸಿದಂತೆ ಶೇಷ, ವಿಷ್ಣು, ಕಮಲ, ಬ್ರಹ್ಮ ಕಾಣಿಸುವರು; ಕಮಲ ಬಾಡಿದೆ, ಮಿಕ್ಕವರು ನಿಶ್ಚೇಷ್ಟರಾಗಿ ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದಾರೆ. ರಂಗಭೂಮಿಯನ್ನು ತುಂಬಿ ಶಿವನೂ, ಇಂದ್ರಾದಿ ದೇವತೆಗಳೂ ಅಲ್ಲಲ್ಲಿ ಅವರಂತೆಯೆ ಬಿದ್ದುಕೊಂಡಿದ್ದಾರೆ. ಇವರೆಲ್ಲರ ಮಧ್ಯದಲ್ಲಿ ಸಮುದ್ರಮಂಥನದಿಂದೇಳುವಾಗ, ಜೊತೆಯಲ್ಲಿ ತಂದದ್ದೇನೊ ಎನುವಂತಹ ಬುರುಗಿನಿಂದ ಹಾಸ್ಯಯುತವಾಗಿ ಕಾಣುವ ಸುರಾರತ್ನ ಮಿಂಚುತ್ತಿದೆ.]

[ಒಳಗಿನಿಂದ ಮರ್ತ್ಯನ ದನಿ:—'ಸುರಾ-ಸುರ ಯುದ್ಧದ ದೃಶ್ಯ. ನಡುವೆ ನಿಂತಿದೆ ಸುರೆ—ದೇವತೆಗಳನ್ನು ಗೆದ್ದ ಅಹಂಕಾರದಿಂದ ಸೆಟೆದು ನಿಂತಿದೆ! ಆದರೂ ಇದು ಮಾನವನ ಕೈಗೆ ಆಯುಧ ಮಾತ್ರ. ದೇವನನ್ನು ಎದುರಿಸಿ ಸೋಲಿಸುವ ಆಯುಧ. ಹ ಹ ಹ — ಹ ಹ ಹ!' ಎಂದು ಸುರಾಪಾತ್ರೆಯನ್ನು ಸಶಬ್ದವಾಗಿ ಒಡೆದು ತೆರೆಗಳಂತೆ ಬರುವ ನಗೆಗುಂಟ.—]

[ತೆರೆ ಬೀಳುವುದು.]

ಖಾದಿಯ ಹೊತ್ತಿಗೆ ೫

# ಪ್ರಪಂಚ ಪ್ರವಾಹ

ಇಲ್ಲವೆ

# ಅನುಭವದ ಅದ್ವೈತ

ಬರೆದವರು:

ಶ್ರೀರಂಗರು



ಕನ್ನಡ ಸರಸ್ವತಿ ಭಾಂಡಾಗಾರ

ಧಾರವಾಡ

೦-೭-೦

ಹಿರಿಯರಿಗೆ ಜ್ಞಾನಾಮೃತ! ತರುಣರಿಗೆ ರಸದೂಟ!

ಮಕ್ಕಳಿಗೆ ಹಿಗ್ಗಿನ ಶೀಕರಣೆ!

# ಓದಿ ಆನಂದಿಸಿರಿ.



**ಬಾಳಿನ ಗುಟ್ಟು:—**

ಮನೆಯಲ್ಲಿ ಮಿಂಚಿನ ದೀಪಗಳಿದ್ದು ತಿಳಿವಿನ ಬೆಳಕಿಲ್ಲದೆ ಎಲ್ಲರೂ ಕಗ್ಗತ್ತಲೆಯಲ್ಲಿ ಮುಗ್ಗರಿಸಿ ದುಃಖದಲ್ಲಿ ಹೊರಳಾಡುತ್ತಾರೆ. ಅವರಿಗೆಲ್ಲ ಇದು ತಿಳಿವಿನ ಪಂಜು! ೧-೧೨-೦

**ದಾರಿಯ ಬುತ್ತಿ:—**

ಒಂದೊಂದು ತುತ್ತೂ ಅಮೃತತ್ವಕ್ಕೆ ಕಾರಣ. ಮುತ್ತು ಮಾಣಿಕ್ಯದಂತಹ ಮಾತುಗಳು ಎಂದು ಬಲ್ಲಿದರಾದ ರಸಿಕರು ಅಭಿಪ್ರಾಯ ಪಟ್ಟಿದ್ದಾರೆ! ೦-೪-೦

**ಶರಪಂಜರ; ಉತ್ತರ ರಂಗ;** ಮತ್ತು **ಸುರಾಸುರ ಯುದ್ಧ:—**

ಶ್ರೀರಂಗರ ಹೊಚ್ಚ ಹೊಸ ನಾಟಕಗಳೆಂದು ಹೇಳಿದರೆ ಸಾಕು ರಸಿಕರಿಗೆ ಸಮಾರಾಧನೆ. ಪ್ರತಿಯೊಂದಕ್ಕೂ ಆ. ೩

**ಕರಟಕರಾಯ** ಮತ್ತು **ನಗೆಯ ಬುಗ್ಗೆ:—**

ಮಕ್ಕಳ ಹಿಗ್ಗಿನ ಹಬ್ಬದೂಟ; ವಿನೋದ ಮತ್ತು ಜ್ಞಾನ ಬೋಧ ಒಮ್ಮೆಲೆ! ಬೆಲೆ ೧೨ ಆ; & ೮ ಆ.

೧ ಕನ್ನಡ ಸರಸ್ವತಿ ಭಾಂಡಾಗಾರ

೨ ಮನೋಹರ ಗ್ರಂಥ ಭಾಂಡಾರ

—ಧಾರವಾಡ—

# ಪ್ರಪಂಚ-ಪ್ರವಾಹ ಇಲ್ಲವೆ ಅನುಭವದ ಅದ್ವೈತ

( ಒಂದು ದೃಶ್ಯ )

## ಪಾತ್ರಗಳು

| ತೆರೆಯ ಮುಂದೆ | ತೆರೆಯ ಹಿಂದೆ |
| --- | --- |
| ಈಕೆಯ ಗಂಡ | ಈಕೆ |
| ಆತನ ಹೆಂಡತಿ | ಆತ |

## ರಂಗಸಂದರ್ಭ

[ ಈ ದೃಶ್ಯದಲ್ಲಿ, ರಂಗಸ್ಥಲದ ಮೇಲೆ ಏಕಕಾಲಕ್ಕೆ ಎರಡು ಬೇರೆ ಬೇರೆ ಮನೆಗಳ ಭಾಗಗಳನ್ನು ಕಾಣಿಸಿದೆ. (ಪ್ರೇಕ್ಷಕರ) ಎಡಬದಿಯ ಅರ್ಧ ಒಂದು ಮನೆ, ಬಲಬದಿಯ ಅರ್ಧ ಮತ್ತೊಂದು ಮನೆ. ಎಡಬದಿಯ ಅರ್ಧದಲ್ಲಿ ಒಂದು ಮೇಜು, ಅದರ ಹಿಂದೆ ಒಂದು ಕುರ್ಚಿ ಇದೆ. ಮೇಜಿನ ಮೇಲೆ ಪುಸ್ತಕಗಳೂ ಕಾಗದಗಳೂ ಹರವಿ ಬಿದ್ದಿವೆ. ಕುರ್ಚಿಯ ಹಿಂಬದಿಗೆ ಒಂದು ಕೋಟನ್ನು ತೂಗಬಿಟ್ಟಿದೆ. ಎಡದ ಕೊನೆಗೆ ಒಂದು ಗೋಡೆ, ಅದರಲ್ಲಿ ಒಂದು ಬಾಗಿಲು. ಈ ಮನೆ **ಈಕೆಯ ಗಂಡನದು. ಈಕೆಯ ಗಂಡನು** ಶರ್ಟನ್ನು ತೊಟ್ಟು, ಹಣೆಗೆ ಕನ್ನಡಕವನ್ನೇರಿಸಿ, ಅತ್ತಿಂದಿತ್ತ ಏನನ್ನೊ ಹುಡುಕುತ್ತ ಚಡಪಡಿಸುತ್ತಿದ್ದಾನೆ. ಎಡದ ಬಾಗಿಲಿನಿಂದ

ಹೋಗುವ ಕೋಣೆಯಲ್ಲಿ ಇವನ ಹೆಂಡತಿ—ಈಕೆ—ಜ್ವರದಿಂದ ಹಾಸಿಗೆ ಹಿಡಿದಿದ್ದಾಳೆ. ಇವಳು ಈ ದೃಶ್ಯದಲ್ಲಿ ರಂಗಸ್ಥಲಕ್ಕೆ ಬರುವುದೆ ಇಲ್ಲ. ಇನ್ನು ಬಲದ ಅರ್ಧ ಆತನ ಮನೆ. ಬಲದ ಕೊನೆಗೆ ಒಂದು ಗೋಡೆ, ಅದರಲ್ಲಿ ಒಂದು ಬಾಗಿಲು, ಆ ಬಾಗಿಲಿನಿಂದ ಒಳಗೆ ಹೋಗುವ ಕೋಣೆ ಯಲ್ಲಿ ಆತ ಜ್ವರದಿಂದ ಹಾಸಿಗೆ ಹಿಡಿದಿದ್ದಾನೆ. ಈ ಪಾತ್ರವೂ ರಂಗಸ್ಥಲದ ಮೇಲೆ ಕಾಲಿಡುವುದಿಲ್ಲ. ಸದ್ಯಕ್ಕೆ ಬಲದ ಅರ್ಧದಲ್ಲಿ ಆತನ ಹೆಂಡತಿ ಕನ್ನಡಿಯನ್ನು ಮುಂದಿಟ್ಟುಕೊಂಡು ಹೆರಳು ಹಾಕಿಕೊಳ್ಳುತ್ತಿದ್ದಾಳೆ. ಎದುರಿನ ಗೋಡೆಗೆ ಧಾನ್ಯದ ಪಾತ್ರೆಗಳಿವೆ; ಒಂದು ಮೂಲೆಯಲ್ಲಿ ನೀರಿನ ಪಾತ್ರೆಗಳಿವೆ; ಇನ್ನೊಂದೆಡೆ ಕಾಯಿ-ಪಲ್ಲೆ-ಈಳಿಗೆ ಮೊದಲಾದ ವಸ್ತುಗಳಿವೆ.

ಎರಡು ಬೇರೆ ಮನೆಗಳ ಭಾಗಗಳನ್ನು ಕಾಣಿಸಿದ್ದರಿಂದ, ರಂಗಸ್ಥಲದ ಮೇಲಿನ ಎರಡೂ ಪಾತ್ರಗಳು-ಈಕೆಯ ಗಂಡ ಮತ್ತು ಆತನ ಹೆಂಡತಿ- ಪರಸ್ಪರರಿಂದ ಮುಖ ತಿರುಗಿಸಿಯೆ ಮಾತನಾಡಬೇಕು. ತಪ್ಪಿ ಕೂಡ ಒಬ್ಬ ರನ್ನೊಬ್ಬರು ನೋಡುವಂತಿಲ್ಲ. ಈಕೆಯ ಗಂಡ ತನ್ನ ಮನೆಯೊಳಗೆ ಮಲಗಿದ್ದ ಈಕೆಯ ಕೂಡ, ಆತನ ಹೆಂಡತಿ ತಮ್ಮ ಮನೆಯೊಳಗೆ ಮಲಗಿದ್ದ ಆತನ ಕೂಡ--ಹೀಗೆ ಸಂಭಾಷಣವನ್ನು ನಡೆಯಿಸಬೇಕು. ]

**ಈಕೆಯ ಗಂಡ** :—(ಅತ್ತಿತ್ತ ಸುತ್ತಾಡುತ್ತ, ಏನನ್ನೊ ಹುಡುಕಿ, ಹುಬ್ಬುಗಂಟಿನಿಂದ ಬಾಗಿಲಿನ ಕಡೆ ನೋಡಿ) ನನ್ನ ಕೋಟು ಎಲ್ಲಿ ಇದೆ ಅಂದೆ?....ಅಂ?.... ನಿನಗೆ ಜ್ವರ ಬಂದಿದೆ, ನನಗೆ ಗೊತ್ತಿದೆ, ಓಣಿಯವರಿಗೂ ಗೊತ್ತಾಗಿದೆ!.... ಇನ್ನು ಯಾಕೆ ನೆರಳುವೆ?...ಏನಂದೆ? ನೆರಳೋದಿಲ್ಲಃ? ಮಾತಾಡತೀಯಾ?.. ಅಂದರೆ ಒಂದಿಷ್ಟು ಗಟ್ಟಿಸಿ ಮಾತಾಡಲ್ಲ!.... ಥೂ!.... (ಎನುತ್ತ ಮತ್ತೆ ಸುತ್ತಾಡುವನು.)

**ಆತನ ಹೆಂಡತಿ** :—(ಹೆರಳು ಹಾಕಿಕೊಳ್ಳುತ್ತಿರುವಾಗ ಇದಿರಿನ ಕೋಣೆಯ ಕಡೆ ನೋಡಿ) ಅಷ್ಟು ಯಾಕ ಗಟ್ಟಿಸಿ ಮಾತಾಡತೀರಿ ಅಂದೆ. ಕೇಳಿಸಿತು ನನಗ ನೀವು ಹೇಳೋದು....ಮೈಯೊಳಗ ಜ್ವರ ಅವೆ, ಗಟ್ಟಿಸಿ ಮಾತನಾಡ ಬೇಡಿರೀ — ಅಂತೀನಿ .... ಇನ್ನೇನು ಓಣಿಯವರಿಗೆಲ್ಲಾ ನಿಮಗ ಜ್ವರ ಬಂದದ್ದು ತೋರಿಸೋದೇನು, ಗಟ್ಟಿ-ಗಟ್ಟಿಸಿ ಒದರಿ?

**ಈಕೆಯ ಗಂಡ** :—(ಮತ್ತೆ ಹತಾಶನಾಗಿ) ಥೂ!....ನಮ್ಮ ಮನೆ ಅವ್ಯವಸ್ಥೆಯ ಮಠ.... (ಮತ್ತೆ ಕೋಣೆಯ ಕಡೆಗೆ ನೋಡಿ) ನೆನಪಾಯಿತೇನು ನಾ

ಕೋಟ ಎಲ್ಲಿ ಇಟ್ಟೇನಿ ಅಂತ?....(ಹತ್ತಿರ ಬಂದು) ಏನಂದೆ?....ಕಾಣಿಸದಿದ್ದರೆ ಕಣ್ಣಿಗೆ ಕನ್ನಡಕ ಹಾಕಿಕೊಂಡು ನೋಡಲಿಯಾ?.... (ತಿರಸ್ಕಾರದಿಂದ) ಹೆಂಗಸಿಗೆ ಬುದ್ಧಿ ಇಲ್ಲಾ ಅನ್ನೋದು ಇದಕ್ಕೇ!....ಆ ಕನ್ನಡಕಾನೇ ನನ್ನ ಕೋಟಿನ ಕಿಸೆಯೊಳಗೆ ಇದೆ, ಅದಕಾಗಿಯೆ ಕೋಟ ಹುಡುಕೋದು ನಾನು— (ಎಸುತ್ತ ಮತ್ತೆ ಸುತ್ತಾಡುವನು.)

ಆತನ ಹೆಂಡತಿ :—ಕೋಟ ತಕ್ಕೊಂಡು ಏನ್ಮಾಡತೀರಿ ಈಗ, ಸುಮ್ಮನೆ ಹೊತ್ತುಕೊಂಡು ಮಲಗೋದನ್ನು ಬಿಟ್ಟು?... ಜ್ವರ ಬಂದಾಗಾದರೂ ಸುಮ್ಮನಿರಬಾರದೂ ನಿಮ್ಮ ಗಂಡಸರ ಜೀವನ ಅಂದರೆ?..(ಕೇಳಿದಂತೆ ಮಾಡಿ) ಏನಂದಿರಿ?....ಅಯ್ಯ, ನಿಮ್ಮ ಕೋಟಿಗೆ ಯಾರು ಕೈಹಚ್ಚಲಿಕ್ಕೆ ಕೂತಾರೆ ಇಲ್ಲಿ—(ಸಿಟ್ಟಿನಿಂದ ಬಾಚಿಕೊಳ್ಳುವಳು.)

ಈಕೆಯ ಗಂಡ :—(ಸಿಟ್ಟಿನಿಂದ ಬಾಗಿಲಿಗೆ ಬಂದು) ನಿನಗೆ ಎಷ್ಟು ಸಲ ಹೇಳಿಲ್ಲ ನನ್ನ ಕೋಟಿಗೆ ಕೈಹಚ್ಚಬೇಡ ಅಂತ?.... ಅದಕ್ಕೇ ಇದ್ದಲ್ಲಿ ಇರೋದೇ ಇಲ್ಲ ಕೋಟು, ಒಂದು ದಿವಸಾದರೂ!.... (ಮತ್ತೆ ಅತ್ತಿತ್ತ ಹುಡುಕುತ್ತ) ಎಷ್ಟು ಹೊಡೆಯಿತೋ ಏನ್ಮರ್ಣ! ಗಡಿಯಾರನೂ ಕೋಟಿನ ಕಿಸೆಯೊಳಗೇ—(ಎಂದು ಮೇಜಿನ ಮೇಲಿನ ಪುಸ್ತಕಗಳನ್ನು ಎತ್ತಾಡಿ ನೋಡುತ್ತಿರುವನು.)

ಆತನ ಹೆಂಡತಿ :—(ಸಿಡುಕಿನಿಂದ) ನನಗ್ಗೊತ್ತಿಲ್ಲ ನಿಮ್ಮ ಕಿಸೇದೊಳಗ ಗಡಿಯಾರ ಅದ-ನೊ ಇಲ್ಲೋ?....(ತಟ್ಟನೆ ಕೇಳಿದಂತೆ ಮಾಡಿ) ಗಡಿಯಾರಕ್ಕ ಕೀಲೀ ಕೊಡೋದು ಏನವಸರೋ ಇವರಿಗೆ?....(ಬೇಜಾರದ ದನಿಯಲ್ಲಿ) ಅಯ್ಯ! ನನ್ನ ಕೈ ಎಣ್ಣೆಣ್ಣೆ ಆಗೇದ; ನಾ ಹ್ಯಾಂಗ ಕೈಹಾಕಲಿ ನಿಂ ಕಿಸೇದೊಳಗ?..

ಈಕೆಯ ಗಂಡ :— (ಗಡಿಯಾರ ಪುಸ್ತಕಗಳ ಕೆಳಗೆ ಕಾಣಲು ಗದ್ದೆನೆಂಬಂತೆ ಬಾಗಿಲಿಗೆ ಬಂದು) ಏ!.... (ದರ್ಪದಿಂದ) ಕಿಸೇದೊಳಗಿನ ಗಡಿಯಾರ ಕಡೆಗೆ ಹ್ಯಾಗೆ ಬಂದಿತು?....(ಕೇಳುತ್ತ) ಏನೇನೇನೇನೇನು?.... 'ಸಿಕ್ಕಿತೊ ಇಲ್ಲೊ' ಅಂದರೆ?.... ಸಿಗಲಿ, ಬಿಡಲಿ.... ವ್ಯವಸ್ಥಾ ಮಹತ್ತ್ವದ್ದು.... ಕಿಸೇದೊಳಗೆ ಇದ್ದದ್ದು ಕಿಸೇದೊಳಗೇ ಇರಬೇಕಾಗಿತ್ತು? (ವೇಳೆ ನೋಡಿ ಒಮ್ಮೆಲೆ) ಎಲೆಲೆ! ೯|| ಗಂಟೆ ಆಯಿತಲ್ಲ?.... ಡಾಕ್ಟರನ್ನಾದರೂ ನೋಡಿ ಬರಲಿಯಾ?.... (ಎಂದು ಗಡಿಯಾರಕ್ಕೆ ಕೀಲಿ ಕೊಡತೊಡಗುವನು.)

**ಆತನ ಹೆಂಡತಿ**:—( ಹೆರಳು ಮುಗಿದು, ತುರುಬು ಕಟ್ಟಿಕೊಳ್ಳುತ್ತ ) ಸಾಕ ತಗೀರಿ! ಅಷ್ಟು ಇಷ್ಟು ನೆಗಡಿ ಕೆಮ್ಮಿಗೆ ಡಾಕ್ಟರ್ ಯಾಕೊ!.... ನಮ್ಮ ನೆರೆಮನೀ ನಾಗಕ್ಕ ಒಂದು ಕಾಢೆ (ಕಷಾಯ) ಹೇಳಿಕೊಟ್ಟಾಳ— (ಎನುತ್ತ ಕನ್ನಡಿಯಲ್ಲಿ ತುರುಬು ಸರಿಯಾಗಿದೆಯೆ ಇಲ್ಲವೆ ನೋಡತೊಡಗುವಳು.)

**ಈಕೆಯ ಗಂಡ**:—( ಕೀಲಿ ಕೊಡುತ್ತಲೆ ) ಸಾಕು ನಿನ್ನ ಕಾಢೆ!.... ಏನಂದೆ?....ಡಾಕ್ಟರಿಗೆ ದುಡ್ಡು ಯಾರು ಕೊಡಬೇಕು?. ನಾ ಕೊಡತೀನಿ, ಮದವೀ ಮಾಡಿಕೊಂಡ ತಪ್ಪಿಗೆ!....ಒಂದಿಷ್ಟು ಜ್ವರ ಏನೊ, ಅದರ ಸಲು ವಾಗಿ ಕಾಢೆ ಕುಡಿದು ಹಾಸಿಗೆ ಹಿಡಿಯೋದು ಎಷ್ಟು ದಿವಸ!....ಏನಂದೆ?.... ಏನು— (ಎನುವಷ್ಟರಲ್ಲಿ ಒಂದೇ ಸವನೆ ಕೀಲಿ ಕೊಟ್ಟುದಕ್ಕೆ ಸ್ಪ್ರಿಂಗ್ ಚಟ್ ಎಂದು ಹರಿಯಲು) ಥೂ!....ನಿನ್ನ ಜೋಡಿ ಮಾತಾಡತಾ ಗಡಿಯಾರ ಕೆಟ್ಟಿತು....! (ಎಂದು ಬಲವಾಗಿ ಅದನ್ನು ಅಲುಗಿಸುತ್ತ ಕಿವಿಯ ಹತ್ತಿರ ಅಗಿಂದಾಗ ಒಯ್ಯುತ್ತಿರುವನು.)

**ಆತನ ಹೆಂಡತಿ**:—(ಎದ್ದು ಕೇಳಿ) ಅಯ್ಯs! ಸುಟ್ಟಿತು ನಿಮ್ಮ ಗಡಿಯಾರ! ಎಷ್ಟರೇ ಹೊಡೆದಿರಬೇಕು....ಇಂದೇನು ನಿಮಗ ಆಪೀಸಿಗೆ ಹೋಗೋದಿಲ್ಲಲಾ!....(ಕನ್ನಡಿಯನ್ನು ತೆಗೆದಿಡತೊಡಗುವಳು.)

**ಈಕೆಯ ಗಂಡ**:—(ಚಡಪಡಿಸುತ್ತ) ಆಫೀಸಿಗೆ ತಡ ಆಗತ್ತದೊ— ಏನ್ಮಣ್ಣೊ?....ನಿನ್ನ ಜಡ್ಡು ಅಂದರೆ ನಮಗೇ ನೋಡು ಎಲ್ಲಾ ಗೋಳು!.... ಗಡಿಯಾರ ಕೆಟ್ಟಿತು, ಕೋಟು ಸಿಗವೊಲ್ಲದು, ಆಫೀಸಿನ ಗತಿ ಇಲ್ಲ— (ತಡೆದು, ಕೇಳಿ) ಏನಂದೆ? ಹುಂ! 'ಇವತ್ತೊಂದು ದಿವಸ ಆಫೀಸ್ ಬಿಟ್ಟರೆ ಆಗೋದಿಲ್ಲೇನು?' ಅಂತ!....

**ಆತನ ಹೆಂಡತಿ**:—( ಕನ್ನಡಿಯನ್ನಿಡುವಾಗ ಒಮ್ಮೆಲೆ ಕೋಣೆಯ ಕಡೆ ನೋಡುತ್ತ ) ಏನು? 'ಇವತ್ತೊಂದು ದಿವಸ ಅಡಿಗೆ ಬಿಟ್ಟರೆ ಆಗೋದಿಲ್ಲೇನು?' ಅಂತೀರಾ?....

**ಈಕೆಯ ಗಂಡ**:—ಏನಾದರೂ ಆಫೀಸಿನವರು ಕೇಳಬೇಕಲ್ಲ?

**ಆತನ ಹೆಂಡತಿ**:—ಏನಾದರೂ ಸುಟ್ಟ ಹೊಟ್ಟೆ ಒಂದು ಕೇಳಬೇಕಲ್ಲ?.. ( ಕೇಳಿ ) ಸಾಕು, ತಗೀರಿ! ಇವತ್ತೊಂದು ದಿವಸ ಆದರೂ ಊಟಾ

ಬಿಡ್ವಾರದೆ ನೀವು?....ಹೊಟ್ಟೆ ಹಾರಾಗಿದ್ದರೆ ಜ್ವರ ತಂತಾನೇ ಇಳೀತಾವ.... (ಕಾಯಿಪಲ್ಲೆ ತಂದಿಟ್ಟುಕೊಂಡು ಆರಿಸುತ್ತ ಕುಳಿತುಕೊಂಡು) ಊಟಾರೆ ಬೇಕು, ಅಡಿಗೆ ಬ್ಯಾಡ....ಗಂಡಸರ ಮಾತಂತೇ ಚೆಂದ!

**ಈಕೆಯು ಗಂಡ**:—ಏನಂದೆ?.... (ಮೂಗು ಏರಿಸಿ) ಹಃ....ನನ್ನ ಊಟದ ಕಾಳಜಿ ಬೇಡ ನಿನಗೆ....ನಾನು ಅಲ್ಲಿಯೆ ಆಫೀಸಿನಲ್ಲಿ ಏನಾದರೂ ತರಿಸಿ ತಿಂತೀನಿ.... ಏನು?.... ಆಂ?.... 'ಮನಿವೊಳಗ ಅನ್ನ ಕುದಿಸಲಿ?'.... ಏನೇನೇನು?.... 'ಅಂದರ ನಿನಗೂ ಒಂದು ತುತ್ತು ಆಗತ್ತದ?'....ಛೆ!.... ಇಷ್ಟು ಜ್ವರ ಮೈಯೊಳಗೆ, ಮತ್ತೆ ಅನ್ನ ತಿನ್ನಬೇಕಂತೆ!.... (ಸೌಮ್ಯವಾಗಿ) ಇದೇನು ಹುಡುಗರ ಹಾಗೆ?.... ನಾಳೆ ಜ್ವರ ಇಳಿದ ಕೂಡಲೆ, ಬೇಕಾದರೆ ಲಗೂನೇ ಅಡಿಗೆ ಮಾಡಿ ಬಿಡು (ಎನುತ್ತ ಮೇಜಿನ ಹತ್ತಿರದ ಕುರ್ಚಿಯಲ್ಲಿ ಕುಳಿತುಕೊಳ್ಳುವನು).

**ಆತನ ಹೆಂಡತಿ**:—(ಬೇಜಾರದ ದನಿಯಲ್ಲಿ) ಅಯ್ಯ! ಲಗೂನೆ ಮಾಡ್ತೀನಿ, ಅಡಿಗೀ ಅನ್ನಲಿಕ್ಕೆ ಏನಿದೆ?....ಹೊಟ್ಟೆಯು ನಿಷ್ಕಾರಕ್ಕ ಅಕ್ಕಿ ಕುದಿಸೋದು!.... ನಿನ್ನಿನ ರಾತ್ರೀವೇ ಎರಡು ಬಕ್ಕರಿ ಹಾಆಂಗೇ ಉಳಿದಾವ ಇನ್ನೂ!.... (ಆರಿಸಿದ ಚೂರುಗಳನ್ನು ಸಾವರಿಸುತ್ತ) ಕಾಢೆ ಮಾಡಬೇಕಿಲ್ಲೊ ಮತ್ತ?

**ಈಕೆಯು ಗಂಡ**:—(ಕುಳಿತಲ್ಲಿಯೆ ಕಣ್ಣುಗಳನ್ನಷ್ಟೆ ಮೇಲಕ್ಕೆ ಏರಿಸಿ) ಏನಂದೆ?.... 'ಕಾಢೆ ಆದರೂ ಮಾಡಿರಿ, ಅನ್ನ ಕುದಿಸದಿದ್ದರೂ ಅಷ್ಟೇ ಹೋಯ್ತು' ಅಂದರೆ— ನಾ ಏನು ಅನ್ನ ಕುದಿಸಲಿಕ್ಕೆ ಒಲ್ಲೆ ಅಂತೀನಿ ಅಂತ ತಿಳಿದೆಯಾ?.... ಅನ್ನ ನಿನಗೆ ಪಥ್ಯ ಅಲ್ಲ ಅಂದೆ— (ಮತ್ತೆ ಕೆಲಸದಲ್ಲಿ ತೊಡಗುದನು).

**ಆತನ ಹೆಂಡತಿ**:—(ಸಾವರಿಸುವುದನ್ನು ಮುಗಿಸುತ್ತ) ಅನ್ನ! ಅನ್ನ! ಅನ್ನ!....ಅನ್ನ ನಿಮಗ ಪಥ್ಯ ಅಲ್ಲಾ ಅಂತ ಬ್ಯಾಡಂತೀನಿ.... ಮಾಡಿದಾಗ ಚಹಾದಂಗಡಿಗೆ ಹೋಗಿ ತಿಂದ ಬರೋದು, ಬ್ಯಾಡ ಅಂದಾಗ ಹಟ ಹಿಡಿದು ಬೇಡೋದು....ಏನ ಗಂಡಸರ ಸ್ವಭಾವನೊ! (ಎನುತ್ತ ಏಳುವಳು).

**ಈಕೆಯು ಗಂಡ**:—(ಮೊದಲಿನಂತೆ, ಆದರೆ ಸಿಟ್ಟಿನಿಂದ) ಥೂ! ಏನು ಹೆಂಗಸರ ಸ್ವಭಾವನೊ — ಅಂತೀನಿ! ಡಾಕ್ಟರನ್ನ ತರತೀನಿ ಅಂದರೆ

'ಬ್ಯಾಡ' ಅಂತೆ! ಕಾಫಿ ಬ್ಯಾಡ ಅಂದರೆ 'ಔಷಧ ಇಲ್ದೆ ಸಾಯ್ತೀನಿ' ಅಂತೆ!.... ಒಂದಿಷ್ಟು ಆಫೀಸಿನ ಕೆಲಸ ನೋಡಬೇಕು ಅಂದರೆ — (ಎಂದು ಎದ್ದು ಕುರ್ಚಿಯನ್ನು ಅಪ್ಪಳಿಸುವನು).

**ಆತನ ಹೆಂಡತಿ** :—(ಅಕ್ಕಿಯನ್ನು ಆರಿಸತೊಡಗುತ್ತ) ಒಂದಿಷ್ಟು ಅಡಿಗೆ ಕೆಲಸಾ ಮಾಡಬೇಕೂ ಅಂದರೆ — (ಒಮ್ಮೆಲೆ) ಏನು?

**ಈಕೆಯ ಗಂಡ** :—(ಒಮ್ಮೆಲೆ) ಎಲಾ! ಇಲ್ಲೇ ಇದೆಯಲ್ಲ?

**ಆತನ ಹೆಂಡತಿ** :—(ಒಳಗೆ ಕೇಳುತ್ತ) ಏನು ಇದೆ ಅಂದಿರಿ?

**ಈಕೆಯ ಗಂಡ** :—(ನಗೆಯಿಂದ) ಕೂತ ಕುರ್ಚಿಗೆಗೆ ತೂಗಹಾಕಿತ್ತು ಕೋಟು.... (ಒಳಗೆ ನೋಡಿ) ಆಂ?.... ಅದೇ ಸಿಕ್ಕಿತು — ಅಂದೆ!

**ಆತನ ಹೆಂಡತಿ** :—(ಸಂಶಯದ ದನಿಯಲ್ಲಿ) ಏನು ಸಿಕ್ಕಿತು ಅಂದಿರ್ರಿ?.... ಗಡಿಯಾರ?.... ತಲೆದಿಂಬಿನ ಕೆಳಗ ಇದ್ದಿತ್ತ?.... ಇರದೇ ಎಲ್ಲಿ ಹೋಗತದ?....

**ಈಕೆಯ ಗಂಡ** :—(ಒಳಗೆ ನೋಡುತ್ತ) 'ಇರದೇ ಎಲ್ಲಿ ಹೋಗತದ?'— ಅಂದರೆ? ಇಷ್ಟೊತ್ತು ಹುಡುಕಿ ಹುಡುಕಿ ಹಣ್ಣಾದೆ! ಈಗ ಹೇಳ್ತಾಳೆ ದೊಡ್ಡ ಮಾತು! ಏನಂದೆ?.... ಆಂ?.... (ಎನುತ್ತ ಕೋಣೆಯ ಕಡೆ ಹೊರಡುವನು).

**ಆತನ ಹೆಂಡತಿ** :—(ಹಂಗಿಸುವ ದನಿಯಲ್ಲಿ) ದೊಡ್ಡ ಮಾತು ಹೇಳಲಿಕ್ಕೆ ನಾ ಏನು ಸಾಲೆಬರೆದ ಸುಂದರಿಯೆ?.... 'ಸಿಕ್ಕಿತು' ಅಂದಿರಿ, ಸಿಗಲಿಕ್ಕೆ ಅದೇನು ಕಳೆದಿತ್ತೇನು— ಅಂದೆ!.... ಆಡಿ ಆಡಿಸಿಕೊಳ್ಳೋದು ನನ್ನದೆ ಹಣೆಬರಹ!

**ಈಕೆಯ ಗಂಡ** :—(ಬಾಗಿಲ ಹತ್ತಿರ ನಿಂತು, ಕೇಳಿ) ನಿನ್ನದಲ್ಲ, ನನ್ನದೇ ಹಣೆಬರೆಹ! (ಎಂದು ಹಣೆ ಬಡಿದುಕೊಳ್ಳುವಷ್ಟರಲ್ಲಿ ಕನ್ನಡಕ ಕೈಗೆ ತಗಲುವುದು. ಅರೆನಿಮಿಷ ಚಕಿತನಾಗಿ—) ನೋಡಿದೆಯಾ? ನಿನ್ನ ಸಲುವಾಗಿ ನನ್ನ ಬುದ್ಧೀನೇ ಹೋಗಿದೆ.... (ಎಂದು ತಲೆ ಅಲ್ಲಾಡಿಸುತ್ತ ಮೇಜಿನ ಕಡೆ ನಡೆಯುವನು).

**ಆತನ ಹೆಂಡತಿ** :—(ಮೊದಲಿನ ದನಿಯಲ್ಲಿಯೆ) ಬುದ್ಧೀನೇ ಹೋಗೇದ ಮದಿವೆ ಆದಮ್ಯಾಲ— ಅಂತೀರಿ.... ಅಷ್ಟರೆ ನನ್ನ ಸುದ್ದೈವಾ ಅಂತೀನಿ....

ಮದಿವೆ ಮಾಡಿಕೊಳ್ಳುವಾಗಲಾದರೂ ಬುದ್ಧಿ ಇತ್ತೊ ಅಂದ್ಹಾಂಗ ಆಯಿತಲ್ಲ?.... (ಎಂದು ಮುಸುಗುಡುವಳು).

**ಈಕೆಯ ಗಂಡ**:—(ಒಮ್ಮೆಲೆ ತಿರುಗಿ ನಿಂತು, ಲಕ್ಷ್ಯಗೊಟ್ಟು ಕೇಳಿದಂತೆ ಮಾಡಿ) ಏ.... (ಹತ್ತಿರ ಬಂದು) ಹುಚ್ಚಿ! ಅಳುವೆ ಯಾಕೆ?.... ಹುಂಹುಂ.... ಜ್ವರ ಹೆಚ್ಚಾದಾವು—ಏನಂದೆ?— ಅಲ್ಲ, ಬುದ್ಧೀನೇ ಹೋಗಿದೆ ಅಂದರೆ, ಇಷ್ಟೊತ್ತು ಹಣೆಯ ಮೇಲೆಯೆ ಏರಿಸಿದ್ದೆ ಕನ್ನಡಕ, ಗೊತ್ತಿಲ್ಲದೆ ಹುಡುಕಿದೆ— (ಮುಗುಳ್ನಗೆಯಿಂದ) ಹಂ.... ನಗುವೆಯಲ್ಲ, ಈಗ ನೀನು?.... ಕಣ್ಣಿಗೆ ಕನ್ನಡಕ ಇಲ್ಲದೆ ನನಗೆ ಕಾಣಿಸೋದಿಲ್ಲ, ಆದರೆ ನನ್ನ ಹಣೆ ಮೇಲೆ ಇದ್ದದ್ದು ನಿನಗಾದರೂ ಕಾಣಿಸಿತೊ ಇಲ್ಲೊ?.... ಹೇಳಬೇಕಾಗಿತ್ತು ನನಗೆ?.... ಕಣ್ಣು ನೋಡಲಿಕ್ಕೆ ಇವೆಯೊ, ಅಳುವುದಕ್ಕೊ?

**ಆತನ ಹೆಂಡತಿ**:—ಕಣ್ಣಿದ್ದದಕ್ಕೆ ಅಳೋದೇ ನಮ್ಮ ಗತಿ!.... ನೋಡೋ ಭಾಗ್ಯ ದೂರ ಉಳಿಯಿತು, ಮಾಡೇನೆಂದರೂ ಇಲ್ಲ. ಜಡ್ಡಿನವರು, ಇವರಿಗ್ಯಾಕ ತ್ರಾಸ ಕೊಡಬೇಕು, ಲಗೂನೆ ಒಂತುತ್ತು ಅನ್ನಾ ನುಂಗಿ, ಹಾಸಿಗೆ ಹತ್ತಿರ ಕೂಡಬೇಕು— ಅಂತ ನಾ ಇಲ್ಲಿ ಅವಸರ ನಡೆಸಿದರೆ ಮಾತಿಗೆ ಮಾತು, ಮಾತಿಗೆ ಮಾತು ಬೆಳಸಿ ಯಾಕ ಆಯಾಸ ಮಾಡಿಕೋಬೇಕೊ? ಜ್ವರಾ ಅವ ಅಂತ ಒಂದಿಷ್ಟು ಹೊಟ್ಟಿಗೆ ಹಾರ, ಮನಸಿಗೆ ವಿಶ್ರಾಂತಿ ಇರಲಿ ಅಂದರೆ - 'ಅಡಿಗೆ ಆಯಿತಿಲ್ಲೊ, ಗಡಿಯಾರಕ್ಕ ಕೀಲಿ ಕೊಟ್ಟೆತಿಲ್ಲೊ, ಅಡಿಗೆ ಆಯಿತಿಲ್ಲೊ, ಗಡಿಯಾರಕ್ಕ ಕೀಲಿ ಕೊಟ್ಟೆತಿಲ್ಲೊ' ಅಂತ ಒಂದೆಸವನೆ ಆಕ್ರೋಶ! (ಕಣ್ಣು ಒರಸಿಕೊಳ್ಳುತ್ತಿರುವಳು)...

**ಈಕೆಯ ಗಂಡ**:—(ರಮಿಸುವ ದನಿಯಲ್ಲಿ) ಅಲ್ಲೇ, ಹೀಗೆ ಯಾಕೆ ಮಾತಾಡತೀ?....'ಆಕ್ರೋಶ' ಅಂದರೇನು?....ಮಾಡಿಕೊಂಡ ಹೆಂಡತೀನ ಬಿಟ್ಟು ಮುಂದಿಗೆ ಕೇಳಲಿಯಾ ನನ್ನ ಕೋಟು ಎಲ್ಲಿ ಇದೆ ಅಂತ?....ಕೇಳಿದ್ನೆ ಹಾಗೆ—ಕೇಳಿದ ಹಾಗೆ ನೀನು ಮೆತ್ತಗಾಗಿಯೆ ಮಾತಾಡಿದಿ, ಅದಕ್ಕೆ ನಾನೇ ಒದರಿ ಕೇಳಿದೆ....ಆಯಿತಲ್ಲ? ಕೋಟೂ ಸಿಕ್ಕಿತು, ಕನ್ನಡಕನೂ ಸಿಕ್ಕಿತು.... ಇನ್ನು ಯಾಕೆ ಆ ರಸಕಸಿ? (ಎನ್ನುತ್ತ ಮೇಜಿನ ಕಡೆ ಹೊರಡುವನು).

**ಆತನ ಹೆಂಡತಿ**:—(ಕೋಣೆಯ ಕಡೆ ಆಶ್ಚರ್ಯದೃಷ್ಟಿಯಿಂದ ನೋಡುತ್ತ) ನನ್ನದೇ ರಸಕಸಿಯೆ ಮತ್ತೆ?.... (ಉಸುರ್ಗರೆದು) ಬೇಡಿಯೆ ಬಂದಿಲ್ಲ,

ತಾಯಿಾ, ಯಾರೇನು ಮಾಡೋದು? ಯಾವಾಗ ಮುಂಜಾನೆಯಿಂದ ನಡೆದಿದೆ ಒಂದೇಸವನೆ, ವಾದ-ವಾದ-ವಾದ, ಮಾತು-ಮಾತಿಗೆ-ವಾದ! ಎದ್ದ ಕೂಡಲೆ ಬಲಗಣ್ಣು ಹಾರಿತು, ಆಗೇ ಅಂದೆ ನಾ, ಇವತ್ತೇನು— (ತಡೆದು) ಏನು?...(ಎಂದು ಹುಬ್ಬುಗಂಟಿಕ್ಕಿ ಲಕ್ಷ್ಯಗೊಟ್ಟು ಕೇಳಿದಂತೆ ಮಾಡುವಳು).

**ಈಕೆಯ ಗಂಡ** :—(ಮೋಜನ ಹತ್ತಿರ ಬಂದು ತಟ್ಟನೆ ತಿರುಗಿ ನಿಂತು) ಮತ್ತೇನದೂ (ಎಂದು ಬೇಜಾರದ ದನಿಯಲ್ಲಿ ಎಳೆಯುವನು). ಏನಂದೇ?.... 'ಬಲಗಣ್ಣು ಹಾರತಿದೆಯೆ?'.... ಅದಕೇ ಹೇಳಲಿಲ್ಲೇನು ನಿನಗೆ, ಈ ಹೊತ್ತು ಊಟ ಬೇಡ ನಿನಗೆ—ಅಂತ?.... ಅಜೀರ್ಣ ಆಗಿದೆಯೊ, ಪಿತ್ತ ಆಗಿದೆಯೊ, ಹಾರದೇ ಬಿಟ್ಟೀತೇ ಬಲಗಣ್ಣು?.... (ಕೇಳಿದಂತೆ) ಸುಟ್ಟಿತು ನಿನ್ನ ಅಶುಭ ಶಕುನ?.... ಎಡಗಣ್ಣನ್ನೂ ಹಾರಿಸು, ಅಷ್ಟು ವಿಶ್ವಾಸ ಇದ್ದರೆ; ಕಣ್ಣಿನ ಅರ್ಧಾಂಗವಾಯು ಏನು ಆಗಿಲ್ಲವಲ್ಲ?.... (ತೀರ ಬೇಜಾರದಿಂದ) ನನಗಿನ್ನು ಕೆಲಸಕ್ಕೆ ಹೊರಡು ಅಂತಿಯೋ? (ಎಂದು ಆಹ್ವಾನಿಸುವವನಂತೆ ಉತ್ತರನಿರೀಕ್ಷಣೆಯ ದೃಷ್ಟಿಯಿಂದ ನಿಲ್ಲುವನು).

**ಆತನ ಹೆಂಡತಿ** :—(ಹುಬ್ಬುಗಂಟು ಸಡಿಲಿಸುತ್ತ ತಿರಸ್ಕಾರದಿಂದ) ನನಗಿನ್ನು ಕೆಲಸಕ್ಕ ಹೊರಡಂತೀರೊ ಬ್ಯಾಡಂತೀರೊ?— (ಮುಂದೆ ಬಿದ್ದ ಹರಳುಗಳನ್ನು ಸಾವರಿಸುತ್ತ) ಗಂಡಸರಿಗೆ ಜಡ್ಡು ಆಗೋದೂ ಅಂದ್ರ ಒಂದು ಸಂಭ್ರಮಾನೇ!.... ಇವರ ಬದಲಿ ಹೋಡಿ ನನಗೇ ಬರಬಾರದಾಗಿತ್ತೆ ಕಾಟಾ-ಕಸಾರಿಕೆ?....

**ಈಕೆಯ ಗಂಡ** :—(ಕೈಚೆಲ್ಲಿ) ಹೆಂಗಸರ ಜಡ್ಡು ಅಂದರೆ ಒಂದು ದೊಡ್ಡ ಯಜ್ಞ ಇದ್ದ ಹಾಗೆ! ಇಡಿಯ ಜಗತ್ತೇ ಆಹುತಿ ಆಗಬೇಕು ಅದರೊಳಗೆ!.... (ಕೇಳಿದಂತೆ ಮಾಡಿ) 'ಅಂಥಾದ್ದೇನು ಆಗೇದ ಈಗ' ಅಂದರೆ?.... ನೋಡಲ್ಲ— ಇತ್ತ ಮನೆಯೊಳಗೂ ಕೆಲಸ ಮಾಡಗೊಡ ವ್ವೊಲ್ಲೆ!.... (ಮತ್ತೆ ಕೇಳಿದಂತೆ ಮಾಡಿ) ಏನು ಹಾಗೆ ಮಾತಾಡಿದರೆ?.... ವ್ಯವಹಾರೇ ನಿಂತುಹೋಗಬೇಕು ಅಂತೀ ಏನು— ನಿನ್ನ ಉಗುರುಬೆಚ್ಚಗಿನ ಜ್ವರದ ಸಲುವಾಗಿ?.... (ಎನುತ್ತ ಕೋಟಿನಲ್ಲಿ ಒಂದು ಕೈ ಸಿಕ್ಕಿಸಿಕೊಂಡು ನಿಲ್ಲುವನು).

**ಆತನ ಹೆಂಡತಿ:—** ( ಮುಂದಿನ ಕೆಲಸವನ್ನು ಮುಗಿಸುತ್ತ ) ಅಂದ್ರೆ- ? ಮನೆಗೆಲಸೇ ತಡೀಬೇಕು ಅಂತೀರೇನು ?.... ( ಕೇಳಿದಂತೆ ಮಾಡಿ ) )ಅಯ್ಯ್ಯ್ಯಯ್ಯ ! ಇದು ನೋಡೇ ಮತ್ತೆ ನನ್ನ ಮ್ಯಾಲೇ ಹರಿಹಾಯೋದು ?.... ಏನಂತಾರ ?.... ಹೂ !.... ಒಂದೇಸವನೆ ಮಾತು ನಡೆಸೀನೇ ನಾನು ?.... ( ಏಳುತ್ತ ) ನಾನಾದ್ರೂ ಏನ್ಮಾಡಲಿ.... ಎಂದೂ ಇಲ್ಲದ ಒಂದು ಜಡ್ಡಿನ ನಿಮಿತ್ತಕ್ಕ ಇಂದು ಮನಿಯೊಳಗ ಇದ್ದೀರಿ— ಅಂತ ಮಾತಾಡತೇನಿ.... ಇಲ್ಲಾ ಅಂದ್ರ ನೀವು ಮನಿಯೊಳಗ ಇರೋದೂ ಅಷ್ಟರಾಗೇ, ನಾನು ನಿಂ ಜೋಡಿ ಮಾತಾಡೋದೂ ಅಷ್ಟರಾಗೇ ! ( ಎನ್ನುತ್ತ ಹೊರಟು ಅಕ್ಕಿಯನ್ನು ಅಡುಗೆಗೆ ಸಿದ್ಧವಾಗಿಟ್ಟು, ಹಿಟ್ಟು-ಚಾಳಣಿ-ಮೊದಲಾದ ಸಾಮಗ್ರಿಗಳನ್ನು ತಂದಿಟ್ಟುಕೊಂಡು ಕುಳಿತುಕೊಳ್ಳುವುದರಲ್ಲಿದ್ದಾಳೆ. )

**ಈಕೆಯ ಗಂಡ:—** ( ಇನ್ನೊಂದು ಕೈಯನ್ನು ತೋಳಿನಲ್ಲಿ ಹಾಕುವುದನ್ನು ಬಿಟ್ಟು ) ಏನಂದೆ ?.... ( ಸಿಡುಕಿನ ದನಿಯಲ್ಲಿ ) ಅಹುದು ! ಅಲ್ಲವೆ ಮತ್ತೆ ! ನಾನು ಮನೆಯೊಳಗೆ ಇರೋದೇ ಇಲ್ಲ !.... ( ಹತ್ತಿರ ಬರುತ್ತ ) ಏನದು ?.... ಆಂ ?.... ಹುಂ ! ' ದಿನಾಲು ಮನೆಹೊರಗೇ ಇರ್ತೀರಿ, ಇವತ್ತೊಂದು ದಿವಸ ಆದ್ರೂ ಮನಿಯೊಳಗ ಇರ್ಬಾರ್ದೆ ? ' ಅಂತಾಳೆ....( ತಲೆ ಅಲ್ಲಾಡಿಸುತ್ತ) ಕಠಿಣ !.... ಈ ಹೆಂಗಸರ ಜೋಡಿ ಮಾತಾಡೋದೇ ಕಠಿಣ '.... ( ಎನ್ನುತ್ತ ಮತ್ತೆ ಕೈಯನ್ನು ಹಾಕಲು ಯತ್ನಿಸುವನು, ಲಕ್ಷ್ಯವಿಲ್ಲದ್ದಕ್ಕೆ ಅದು ಸಾಧಿಸುವುದಿಲ್ಲ, ಮುಖದ ಮೇಲೆ ಸಿಟ್ಟಿನ ಕಳೆ ಮೂಡುವುದು ).

**ಆತನ ಹೆಂಡತಿ:—** ( ಹಿಟ್ಟು ಚಾಳಿಸುವುದನ್ನು ತಡೆದು ) ಇಲ್ಲ. ನನಗ ಕೇಳಿಸಲಿಲ್ಲ-ಅಂದೆ !.... ( ಕೇಳಿದಂತೆ ಮಾಡಿ ) ಹುಂ ! ಕಠಿಣ ಇರದೇ ಏನು ಹೆಂಗಸರ ಜೋಡಿ ಮಾತಾಡೋದು ? ರೂಢಿ ಆದರೂ ಎಲ್ಲಿದೆ ನಿಮಗೆ ಮನೆಯ ಹೆಂಡತಿ ಜೋಡಿ ಮಾತಾಡೋದಕೆ ? ( ಮತ್ತೆ ಚಾಳಿಸ ತೊಡಗುವಳು ).

**ಈಕೆಯ ಗಂಡ:—** ( ಕೋಟಿನ ತೊಂದರೆಗಾಗಿ ಸಿಟ್ಟಿನ ದನಿಯಿಂದ ) ಏನು ಹಾಗೆ ಮಾತಾಡಿದರೆ ?.... ಹಂ-ನನಗೆ ತಿಳಿದಿದೆ ನೀನು ಮಾತಾಡಿದ್ದು ! ' ಹೆಂಗಸರ ಜೋಡಿ ಯಾಕ, ಹೆಂಡತಿ ಜೋಡಿ ಕಠಿಣ ಅನ್ನಿರಿ ' ಅಂತೆ ?.... ಜ್ವರ ಏರತಾ ಇದೆಯೊ ಏನು- ಹೀಗೇಕೆ ಬಡಬಡಿಸುವೆ ?.... ಏನೆಂದೆ ?....

'ಹೊರಗೆ ಹೋಗಲಿಕ್ಕೆ ಯಾವಾಗಲೂ ಆತುರ' ಅಂದರೆ?.... (ಹತ್ತಿರ ಬಂದು) ಏ, ಹುಚ್ಚೀ, ಹೊರಗೆ ಅಂದರೆ ನಾ ಎಲ್ಲಿ ಹೋಗತಿರತೀನಿ ಅಂತ ತಿಳಿದಿರುವೆ?.... ಆಫೀಸಿಗೆ!.... ಆಫೀಸಿನೊಳಗೆ ಹೆಂಗಸರು ಇದ್ದಾರೆ ಅಂತ ತಿಳಿದೆಯೊ ಏನು?.... (ತಿರಸ್ಕಾರದಿಂದ ಉಸುರ್ಗರೆದು ಮತ್ತೆ ಮೇಜಿನ ಕಡೆ ನಡೆಯುವನು; ಕೋಟು ಹಾಗೇ ತೂಗುಬಿದ್ದಿದೆ).

**ಆತನ ಹೆಂಡತಿ** :— (ಕೆಲಸದಲ್ಲಿ ತೊಡಗಿದಂತೆಯೆ ನಟಿಸುತ್ತ) ಆಫೀಸಿನಾಗ ಹೆಂಗಸರ ಇರತಾರೊ ಇಲ್ಲೊ ನನಗೇನು ಗೊತ್ತು, ತಾಯಿ! ನಾ ಏನು ಕಲಿತಾಕೆಯೆ, ಏನು ಸುಧಾರಿಸಿದಾಕೆಯೆ? ನಾ ಆಯ್ತು, ನನ್ನ ಮನೆ ಆಯ್ತು, ನನ್ನ ಕೆಲಸ ಆಯ್ತು!.... ಹೊರಗೆ ಹೋದಾಗ ಗಂಡಸರು ಏನೇನು ಮಾಡ್ತಾರ, ಎಲ್ಲೆಲ್ಲಿ ಹೋಗ್ತಾರ, ಅನ್ನೋ ಉಸಾಬರಿ ನನಗೆ ಯಾಕೆ?

**ಈಕೆಯ ಗಂಡ** :— (ಒಮ್ಮೆಲೆ ಸಿಟ್ಟಿನಿಂದ ನಡೆದುಬರುತ್ತ) ಏ-ಏ-ಏ! ಸಾಹೇಬರು ಖಟ್ಲೆ ಹಾಕಿಯಾರು ಅಂದೆ ಖಟ್ಲೆ ನಿನ್ನ ಮೇಲೆ, ಹೀಗೆ ಮಾತಾಡಿದರೆ! ಆಫೀಸು.... ಅಂದರೇನು ಯಮಪುರ ಜಾತ್ರೆ ಅಂತ ತಿಳಿದಿರುವೆಯಾ?.... ಏನಂದೆ?.... ಮತ್ತೆ ನಾನೇ ಕೆಟ್ಟ ಕೆಟ್ಟ ಮಾತಾಡತೀನೆಯೆ?.... (ಕೋಟು ತೂಗುಬಿದ್ದದ್ದು ಲಕ್ಷ್ಯಕ್ಕೆ ಬಂದು) ಥೂ!.... ಈ ತೋಳಿಗೇನು ಧಾಡಿ ಆಗಿದೆ ಅಂತೀನಿ!.... (ಸರಿಯಾಗಿ ಕೈಯನ್ನು ನೇರಿಸುವ ಯತ್ನದಲ್ಲಿದ್ದಾನೆ).

**ಆತನ ಹೆಂಡತಿ** :— (ಒಮ್ಮೆಲೆ ಚಕಿತಳಂತೆ ಒಳಗೆ ನೋಡುತ್ತ) ಅಯ್ಯಯ್ಯ!.... ಏನದು?.... ಏನು?.... ಏನ ತಾಯಿ! ಒಂದು ಮಾತಿಗೆ ಒಂದು ಅಬ್ಬರ!.... ನನ್ನ ಮಾತಿಗೆ ಉತ್ತರ ಕೊಡಲಿಕ್ಕೆ ಬರಲಿಲ್ಲ, ಅದಕ್ಕ ತೋಳಿನ ಮ್ಯಾಲೆ ಸಿಟ್ಟು!.... 'ತೋಳಿಗೇನು ಧಾಡಿ' ಅಂದ್ರಿ?.... ನಾ ನಿಮಗ ಎಷ್ಟು ಸಾರೆ ಹೇಳೀನಿ, ತಲೆದಿಂಬಿನ ಮ್ಯಾಲೆ ತಲೆ ಇಡಿರಿ, ನಿದ್ದೀ ವಳಗ ತೋಳು ಜುಂ ಹಿಡೀತದೆ, ತೋಳ ಹಾಂಗ ಇಡಬ್ಯಾಡರಿ ಮಲಗುವಾಗ-ಅಂತ!....ಏನಂದಿರಿ?.... ನನ್ನ ಕೈಯೆಲ್ಲಾ ಹಿಟ್ಟಾಗೇದ, ಈಗ ನೀವೇ ಒಂದಿಷ್ಟು ಮೆಲ್ಲಗೆ ಕೈ ತಗೀರಲ್ಲ ಕೆಳಗ?.... (ಮತ್ತೆ ಕೇಳಿದಂತೆ ಮಾಡಿ) ಅಯ್ಯ! ಯಾತಕ್ಕೂ ನಾನೇ ಬೇಕು! (ಎಂದು ಕೈ ಒರೆಸಿಕೊಂಡು ಒಳಗೆ ಹೋಗುವಳು).

**ಈಕೆಯ ಗಂಡ**:— ( ಸಿಟ್ಟು ಬಂದುದಕ್ಕೆ ಕೈ ಸೇರಿಸಲು ನಿಂತಲ್ಲಿಯೆ ಸುತ್ತು ತಿರುಗುತ್ತಿದ್ದಾನೆ. ಕೊನೆಗೆ ಕಾಲು ಅಪ್ಪಳಿಸಿ ) ಥೂ !.... ಏನಂದೆ ?.... 'ಯಾತಕ್ಕೂ ನಾನೇ ಬೇಕು' ಅಂದರೆ ?.... ತೋಳು ತಿರುವಿ ಬಿದ್ದಿದೆಯೊ ಏನೊ! ಒಂದೇ ಕೈಯಿಂದ ಅದನ್ನ ಹೇಗೆ ಸರಿ ಮಾಡೋದು !.... ( ತಿರಸ್ಕಾರದಿಂಥ ) ಸಾಕು ! ನೋಡಿಲ್ಲಿ, ನಾನು ಬರಿಯ ಸಿಟ್ಟಿಗೇ ಬಂದೀನೆಂಯೊ, ಏನು ಖರೇನೇ ( ನಿಜವಾಗಿಯೂ) ತೋಳು ತಿರುವಿ ಬಿದ್ದಿದೆಯೊ ? (ಎನ್ನುತ್ತ ಒಳಗೆ ಹೋಗುವನು).

**ಆತನ ಹೆಂಡತಿ**:— ( ಹೆಮ್ಮೆಯ ಮುಗುಳ್ನಗೆಯಿಂದ ಹೊರಗೆ ಬರುತ್ತ ) ಹುಡುಗರು ಬ್ಯಾರೆ ಅಲ್ಲ, ಇವರು ಬ್ಯಾರೆ ಅಲ್ಲ ( ಎಂದು ಮತ್ತೆ ಗಂಡನ ಕೋಣೆಯ ಕಡೆಗೆ ಮುಖ ಮಾಡಿ ತನ್ನ ಕೆಲಸಕ್ಕೆ ಕುಳಿತುಕೊಳ್ಳುವಳು ).

**ಈಕೆಯ ಗಂಡ**:— ( ಕೋಟು ಸರಿಯಾಗಿ ಹಾಕಿಕೊಳ್ಳುತ್ತ ಸಿಟ್ಟಿನಿಂದ ಮಾತ ನಾಡಲು ಯತ್ನಿಸುತ್ತ ಬರುವನು. ) ಹಃ ! 'ಹುಡುಗರು ಬ್ಯಾರೆ ಅಲ್ಲ, ಇವರು ಬ್ಯಾರೆ ಅಲ್ಲ' ಅಂತೆ !....ಏನು ದೊಡ್ಡ ವಿಷಯನೋ !.... ( ಮೇಜಿನ ಹತ್ತಿರ ಬಂದು ) ಗಡಿಯಾರ ನಿಂತು, ಈಕೆಯ ಬಾಯಿ ನಿಂತಿಲ್ಲ ಇನ್ನೂ ! ( ಎನ್ನುತ್ತ ಗಡಿಯಾರವನ್ನು ಕಿಸೆಯಲ್ಲಿ ಒಗೆದು ).... ಆಂ ? ( ಎಂದು ಕೋಣೆಯ ಕಡೆಗೆ ನೋಡುವನು).

**ಆತನ ಹೆಂಡತಿ**:— ( ಸಿಟ್ಟಿನ ಯತ್ನದಿಂದ ) ಏನಂದಿರಿ ?...., ಅಯ್ಯ ! 'ಏನಿಲ್ಲ' ಯಾಕ ?.... ನನಗ ಕೇಳಿಸೇದ ಅಂದೆ, ನೀವು ಅಂದದ್ದು.... ನನ್ನ ಬಾಯಿ ನಿಂತಿಲ್ಲ ಅಂತ !.... ನನ್ನದೂ ಖೋಡಿ ಸ್ವಭಾವ !.... ಅವರ ಮನಸಿಗೆ ಬರೋದಿಲ್ಲ— ಅಂತ ಗೊತ್ತಿದ್ದರೂ ಹಾಅಂಗೇ ಮಾತಾಡ ತೀನಿ !.... ( ಉಸುರ್ಗರೆದು ) ಸತ್ತ ಮ್ಯಾಲಾದರೂ ನನ್ನ ಮಾತು ನೆನಪಿಗೆ ಬಂದಾವಲ್ಲ ! ( ಕಣ್ಣೀರು ಹಿಟ್ಟಿನ ಮೇಲೆ ಬೀಳುವುದನ್ನು ಕಂಡು ಬದಿಗೆ ಮುಖ ಮಾಡಿ ಬಿಕ್ಕುವಳು ).

**ಈಕೆಯ ಗಂಡ**:— ( ಲಕ್ಷ್ಯಗೊಟ್ಟು ಕೇಳಿದಂತೆ ಮಾಡಿ ) ಎಲೆ !.... ( ಹತ್ತಿರ ಬಂದು ) ಎಲೆಲೆ !.... ಒಮ್ಮೆಲೆ ಬಿಕ್ಕಲಿಕ್ಕೆ ಏನಾಯಿತು ನಿನಗೆ ? ( ಸುಳ್ಳು ನಗೆಯಿಂದ ) ಸಾಯೋ ವಿಚಾರ ಯಾಕೆ ನಿನಗೆ ? ( ಗಟ್ಟಿಯಾಗಿ ನಗುತ್ತ ) 'ಸತ್ತಮ್ಯಾಲೆ ನಿನ್ನ ಮಾತು ನೆನಪಿಗೆ ಬರೋ' ದಂದ್ರೆ .... ಹಹ !.... ನೀನು ದೆವ್ವ ಆಗುವುದೆ ಖಾತ್ರಿ ಮಾಡಿಕೊಂಡಿರುವೆ ಏನು ? ಹಹ ! (ಎನ್ನುತ್ತ ಮೆಲ್ಲಗೆ ಮೇಜಿನ ಕಡೆ ಹೆಜ್ಜೆಗಳನ್ನಿಡುವನು ).

**ಆತನ ಹೆಂಡತಿ** :—( ತಡೆದು, ಕಣ್ಣೊರೆಸಿಕೊಂಡು, ಕೋಣೆಯ ಕಡೆ ದಿಟ್ಟಿಸಿ, ತ್ವೇಷದ ದನಿಯಲ್ಲಿ ) ಯಾಕ ಖಾತ್ರಿ ಮಾಡಿಕೊಂಡಿರಬಾರದು, ದೆವ್ವ ಆಗೋದು—ಅಂತೀನಿ ! .... ಮದುವೆ ಆದದ್ದೇ ಆದದ್ದು, ಒಂದಾದರೂ ಮನಸಿನಾಗಿನ ವಾಸನಾ ಸಾಧಿಸಿಕೊಂಡಿಲ್ಲ ಈ ಮನೀವಳಗ ! .... ( ಸಿಟ್ಟಿನಿಂದ ) ಸಾಕು ತಗೀರಿ, ಏನು ಮೋಜು ಮಾತು ಅಂತ ನಗತೀರಿ ?

**ಈಕೆಯ ಗಂಡ** :— ( ನಗೆ ತಡೆಯುತ್ತ ) ಅಲ್ಲ— ( ಒಮ್ಮೆಲೆ ಹೊರಗೆ ಗಂಟೆ ಬಾರಿಸಿದ್ದನ್ನು ಕೇಳಿ ಲಗಬಗೆಯಿಂದ ) ಎಲೆಲೆ ! ಹನ್ನೊಂದು ಹೋಡೀತೊ, ಹನ್ನೆರಡು ಹೋಡೀತೊ !....ಥೂ ! ನನ್ನರುಮಾಲು ಎಲ್ಲಿ ?....(ಸುತ್ತಾಡುತ್ತ) ದಿನಾಲು ತಡ ಆಗೋದೇನು ನನ್ನ ಹಣೆಬರೆಹಕ್ಕೆ ತಪ್ಪಿದ್ದಲ್ಲ !.... (ಎಂದು ಚೆಲ್ಲಾಪಿಲ್ಲಿಯಾಗಿ ಸಾಮಾನುಗಳನ್ನು ಹರವುತ್ತ ರುಮಾಲನ್ನು ಹುಡುಕುವನು).

**ಆತನ ಹೆಂಡತಿ** :— ( ಹಿಟ್ಟು ಸಾವರಿಸುತ್ತ ) ಆಯಿತು-ತಡ ಆದರ ನನ್ನ ಊಟಕ್ಕೇ ತಡ ಆಗೋದು....ನನಗೂ ಇನ್ನು ಹೊಟ್ಟೇನೆ ತುಂಬಿದ್ಹಾಂಗ ಆಗೇದ ....ಏನೂ ?.... ಯಾಕ-ಅಂತೀರಾ ? .... ಒಂದು ದಿವಸಾದರೂ ನೀವು ಹೆಂಡತೀ ಜೋಡಿ ನಕ್ಕು ನಲಿದಾಡಿದಿರಿ ಅಂತ ನನಗ ಅಷ್ಟು ಸಂತೋಷ ಆಗೇದ !.... ( ಏಳತೊಡಗುವಳು ).

**ಈಕೆಯ ಗಂಡ** :— ( ಸಿಟ್ಟಿನಿಂದ ) ಕೇಳಿಸಿತೇನು ? .... ನಗುವೆ ಯಾಕೆ ಹಾಗಾದರೆ ?.... ಏನೂ ? .... ಓಹೊಹೊ ! .... ಅಷ್ಟು ಸಂತೋಷ ಆಗಿದೆಯಲ್ಲವೆ ನಿನಗೆ ?....ಏನಂದೆ ?....' ತಡಮಾಡಿ ಹೋದರೆ— ' ಏನು ?.... ಯಾರು-ಯಾರು ತಿಳೀತಾರೆ ? .... ಆಫೀಸಿನೊಳಗೇ ? .... ( ಒಮ್ಮೆಲೆ ) ಏನೇನೇನೇನೋ ?.... ' ಹೆಂಡತಿ ಜೋಡಿ ನಕ್ಕು ನಲಿದಾಡತಾನೆ, ಅದಕ್ಕ ತಡ ಆಯಿತು ' ಅಂತೆ ಆಫೀಸಿನೊಳಗೆ ತಿಳೀತಾರೆಯೆ ? ....ಆಫೀಸಿನ ಕೆಲಸ ಬಿಟ್ಟು ಹೆಂಡತಿ ಜೋಡಿ ಚೆಲ್ಲಾಟ ಆಡುವಷ್ಟು ನನಗೆ ತಲೆ ಇಲ್ಲ ಅಂತೆ ತಿಳಿದೆಯೇನು ನೀನು ?.... ಅದಕ್ಕ ಹೇಳತೀನಿ-ತಲೆ ಇದೆ ನನಗೆ, ಆದರೆ ಆ ತಲೆಗೆ ಬೇಕಾದ ಹಾಳು ರುಮಾಲು ಎಲ್ಲಿ ಇದೆ ಅಂತೆ ಕೂಗಿಕೊಳ್ಳತಾ ಇದ್ದೀನಿ.... ಥೂ ! ( ಮತ್ತೆ ಸುತ್ತಾಡುವನು )

**ಆತನ ಹೆಂಡತಿ** :— ( ಎದ್ದು ಸಿಡುಕಿನಿಂದ ) ಕೇಳಿಸಿತು- ಅಂದೆ ! .... ಹೌದು—ಮೈಯೊಳಗೆ ಜ್ವರ ಇದ್ದಾಗ ಯಾಕ ಕೂಗಿಕೊಳ್ಳಬೇಕೊ ಸುಮ್ಮ

ಸುಮ್ಮನೆ! .... ನಿಮಗೊಂದು ಇವತ್ತು ಜಡ್ಡು ಆಗೇದ ಅಂತ ಮನೆ ಹಿಡಿದೀರಿ.... ಅಷ್ಟಕ್ಕೇ ಮನೆಗೆಲಸ ಬಿಟ್ಟು ಚಕ್ಕಂದ ಆಡತಾ ಕೂಡಲಿಯಾ ನಾನು?.... ( ಕೇಳಿ, ನಾಚಿಕೆಯಿಂದ) ಸಾಕು, ತಗೀರಿ! ಮೊನ್ನೆ ಮದಿವೀ ಆದವರ ಹಾಂಗ ಮಾತಾಡತಾರ!.... ಮದಿವೀ ಹೊಸತಾಗಿ ಮಾಡಲಾರದ ಚಕ್ಕಂದ– ( ಕೇಳಿ ) ಉಂ ( ಎಂದು ನಾಚಿಕೆಯಿಂದ ಸೆರಗಿನ ತುದಿಯನ್ನು ಕಚ್ಚುವಳು ).

**ಈಕೆಯ ಗಂಡ:** — ( ಅವಸರದ ಆತುರದಿಂದ ) ಸಾಕಿನ್ನು ನಿನ್ನಮಾತಿಗೆ ಮಾತು! ‘ಮದಿವೆಯ ಹೊಸತಾಗಿ ಮಾಡಲಾರದ ಚಕ್ಕಂದ ಈಗ ಮಾಡ್ತಾರೆ?’ ಅಂತ ಮತ್ತೆ ನನ್ನನ್ನೆ ಹಂಗಿಸತಾಳೆ! .... ಆ ಮಾತು ಯಾಕೆ ಈಗ?.... ನನ್ನ ರುಮಾಲು ಇಲ್ಲಾ ಅಂತ ತಲೆತಲೆ ಬಡಿದು ಕೊಳ್ಳತೀನಿ ನಾನು!.... ಏನಂದೆ? .... ಹೋಗುವೆ–? .... ಎಲ್ಲಿಗೆ? .... ಏನೂ? .... ನಾನು ಹೀಗೆ ಮಾಡಿದರೆ ನೀನೇ ಹೋಗಿಬಿಡುವೆಯಾ? .... ನಾ ನನ್ನ ರುಮಾಲು ಹುಡುಕಿದರೆ ನೀ ಯಾಕೆ ಹೋಗಬೇಕು? ಹುಚ್ಚಿ! ( ಎನ್ನುತ್ತ ಕುರ್ಚಿಯ ಹತ್ತಿರ ನಡೆದು ಬರುವನು ).

**ಆತನ ಹೆಂಡತಿ:**— ( ಹೊರಡುತ್ತ ) ಯಾಕೆ ಹೋಗಬೇಕು-ಅಂದರೆ? ಅಯ್ಯ! ನನ್ನ ಹಣೆಬರೆಹ! ಮಾತಿನ ಭರದೊಳಗೆ ಬೇಳೆ ಎಲ್ಲ ಹೊತ್ತಿ ಹೋಯಿತೋ ಏನೊ, ಇದರ ಸುಡಲಿ! .... ವಾಸಬರೂದಿಲ್ಲೇ? .... ( ಕೇಳಿ ) ಏನೂ? ( ಎಂದು ರಂಗದ ತುದಿಯ ಕಡೆಗೆ ನಡೆಯುವಳು )

**ಈಕೆಯ ಗಂಡ:**— ಏನಂದೆ? .... ವಾಸ ಬರತಿದೆಯೆ?.... (ಅಣಕಿನ ದನಿಯಲ್ಲಿ) ಅಹುದು! ಹೊರಗೆ ಹೋಗುವಾಗ ಗಮಗಮ ಅತ್ತರದೆಣ್ಣೆ ಸುರುವಿಕೊಳ್ಳುತಾ ಇದ್ದೀನಿ— ಮೈಮೇಲೆ! .... ಅಂದರೇನು ಅಂದರೆ?.... ಅವಸರದೊಳಗೆ ಮಸಿದೌತಿ ಉರುಳಿತಿಲ್ಲಿ ಮೇಜಿನ ಮೇಲೆ— ಎಷ್ಟು ದಿವಸದ ಮಸಿಯೊ! — ಆದರದು ವಾಸ! ( ಎಂದು ಪುಸ್ತಕಗಳನ್ನೂ ಕಾಗದಗಳನ್ನೂ ಸರಿಸಿಡುವಾಗ ಒಮ್ಮೆಲೆ ಎದ್ದು ) ಥೂ! ನೋಡಿದಿಯಾ? ಇದೂ ಇಲ್ಲಿಯೆ ಇದೆ ( ಎಂದು ಕುರ್ಚಿಯಿಂದ ರುಮಾಲನ್ನು ಎತ್ತಿ ) ಮೇಲೆ ಕೂತು ಇಸ್ತ್ರೀನೇ ಮುರಿದು ಹೋಗಿದೆ!.... ( ಸಿಟ್ಟಿನಿಂದ ) ಯಾಥದೇನು? ಇಸ್ತ್ರಿ

ಏನು ನನಗೆ ಮಾಡಿರುವುದೇನು ? .... ( ರುಮಾಲನ್ನು ಜಾಡಿಸಿ ಅವಸರದಿಂದ ಸುತ್ತಿಕೊಳ್ಳುತ್ತ ) ರುಮಾಲದ ಇಸ್ತ್ರೀ ! ( ಲಗಬಗೆಯಿಂದ ರಂಗದ ತುದಿಗೆ ನಡೆಯುತ್ತ ) ನಾ ಬೇಗ ಬರತೀನಿ ಆಫೀಸಿನಿಂದ.

**ಆತನ ಹೆಂಡತಿ** :— ( ರಂಗದ ತುದಿಗೆ ನಿಂತು ಮುಖ ತಿರುಗಿಸಿ ಗಂಡನ ಕೋಣೆಯ ಕಡೆಗೆ ನೋಡುತ್ತ ) ಬ್ಯಾಗ-ಬ್ಯಾಗ ಅಂದ್ರೇನು ? ಕಡೆಗೆ ಬ್ಯಾಳಿಗೆ ನೀರ್ಹಾಕಿ ಅನ್ನದ್ದು ಒಲೆಯ ಮ್ಯಾಲೆ ಇಟ್ಟಾದರೂ ಬರ್ತೀನಿ.

**ಈಕೆಯ ಗಂಡ** :— ( ರಂಗದ ತುದಿಗೆ ನಿಂತು ಮುಖ ತಿರುಗಿಸಿ ಹೆಂಡತಿಯ ಕೋಣೆಯ ಕಡೆಗೆ ನೋಡುತ್ತ ) ಬೇಗ — ಅಂದರೇನು ? ಆಫೀಸ ಬಿಟ್ಟ ಕೂಡಲೇ ಬರ್ತೀನಿ....

**ಆತನ ಹೆಂಡತಿ** :— ( ಅರ್ಧ ತನ್ನಷ್ಟಕ್ಕೆ ) ಬಿಡಲಾರದ ಕರ್ಮ !

**ಈಕೆಯ ಗಂಡ** :— ( ಅರ್ಧ ತನ್ನಷ್ಟಕ್ಕೆ ) ಬಿಟ್ಟೇತು ಹೇಗೆ ಪ್ರಪಂಚ !

[ ಆ ಮೇಲೆ ಇಬ್ಬರೂ ನಿಂತಲ್ಲಿಯೆ ತಂತಮ್ಮ ಕೋಣೆಗಳ ಕಡೆಗೆ ಲಕ್ಷ್ಯ ಗೊಟ್ಟು ಕೇಳಿದಂತೆ ಮಾಡುವರು. ಆ ಮೇಲೆ ಬೇಜಾರದ ಮುಖಮುದ್ರೆ ಯಿಂದ ತಂತಮ್ಮ ಕೋಣೆಗಳ ಕಡೆಗೆ ಸಾಗಿ ಬಾಗಿಲ ಹತ್ತಿರ ನಿಂತು—]

**ಆತನ ಹೆಂಡತಿ** :— ( ತನ್ನ ಗಂಡನಿಗೆ ) ಮತ್ತ ಯಾಕ—

**ಈಕೆಯ ಗಂಡ** :— ( ತನ್ನ ಹೆಂಡತಿಗೆ )— ಕರೆದೆ ಏನು ನನ್ನ ?

[ ಇಬ್ಬರೂ ನಿಂತಲ್ಲಿಯೆ ಉಸುರ್ಗರೆದು ತಲೆ ಅಲ್ಲಾಡಿಸುವರು ]

( ತೆರೆ )

---

ಮುದ್ರಕರು :
ಶಂ. ವಾ. ಜಠಾರ
ವಿಶಾಲ ಕರ್ನಾಟಕ ಪ್ರೆಸ್, ಧಾರವಾಡ.



ಪ್ರಕಾಶಕರು :
**ಜಿ. ಕೆ. ಕೇಳಕರ**

## ಆಳವಾದ ಅಭ್ಯಾಸಕ್ಕೆ ನೆರವು

# ಶರ-ಪಂಜರ

**ಪರಿಚಯ ಮತ್ತು ವಿಮರ್ಶೆ**– ಇಲ್ಲಿಯ ಪಿಂಚಣಿಯ ಮುದುಕನನ್ನು ನನ್ನು ಮಹಾಭಾರತದ ಭೀಷ್ಮಾಚಾರ್ಯರಿಗೆ ಹೋಲಿಸಿದ್ದಾರೆ, ಇಷ್ಟು ಸತ್ತ ಮುದುಕನೆಂಬ ಒಂದು ಸಾದೃಶ್ಯದ ಮೇಲೆ ಶ್ರೀಕೃಷ್ಣನ ಚಕ್ರವನ್ನು ತಡುಕಿದ ಭೀಷ್ಮಾಚಾರ್ಯರ ವ್ಯಕ್ತಿತ್ವವನ್ನೂ ಈ ಮುದುಕನ ವ್ಯಕ್ತಿತ್ವವನ್ನೂ ತೂಗಿ ನೋಡುವುದೇನು ಇಲ್ಲಿ ಪ್ರಾಪ್ತವೆನಿಸುವುದಿಲ್ಲ. ಮುದುಕನ ಜೀವನದಲ್ಲಿ ಆಗಿಹೋದ–ಆಗಬಾರದ–ಆಗುಹೋಗುಗಳನ್ನು ಅವನ 'ಹಳವಂಡ'ದ ಮುಖಾಂತರ ಇಲ್ಲಿ ನಾಟಕ ರೂಪವಾಗಿ ಚಿತ್ರಿಸಿದ್ದಾರೆ. ಮುದುಕನ ಮನಸ್ಸನ್ನು ಪದರು ಪದರಾಗಿ ಹಿಂಜಿ, ಅವನ ವಿವೇಕಕ್ಕೂ ಅವನ ಅತ್ಯಾಚಾರಗಳಿಗೂ ನಡೆಯುವ ತಿಕ್ಕಾಟ– ತಾಕಲಾಟಗಳನ್ನು ಮಾರ್ಮಿಕವಾಗಿ ಇಲ್ಲಿ ನಿರೂಪಿಸಲಾಗಿದೆ. 'ಬಾಳುವೆ–ಮರಣಗಳ ನಡುವೆ, ಮೀಟಿಂಗ–ಆಫೀಸಿನ ನಡುವೆ, ಸ್ಮರಣ–ವಿಸ್ಮರಣದ ನಡುವೆ ಹೊಯ್ದಾಡುವ' ಈ ಕಲಿಯುಗದ ಭೀಷ್ಮಪಿತಾಮಹನ ಮನಃಪಟಲದ ಮೇಲೆ ವಾಸ್ತವತೆ, ವಿಡಂಬನೆ, ಕಲ್ಪನಾಚಮತ್ಕೃತಿ, ವ್ಯಂಗ್ಯ ಹಾಸ್ಯಗಳಿಂದೊಡಗೂಡಿದ ಒಂದು ಹೊಸ ಸೃಷ್ಟಿಯನ್ನೇ ಉಂಟು ಮಾಡಿದ್ದಾರೆ. ಭೂತಗಳು ಸುಳಿದಾಡಿ ಸಂಭಾಷಣೆ ಮಾಡುತ್ತಿರುವ ಈ ನಾಟಕದಲ್ಲಿ ಇದೆಂತಹ ವಾಸ್ತವತೆಯೆಂದೆನಿಸಬಹುದು. ಆದರೆ ಇಲ್ಲಿ ಕಾಣುವ ವಾಸ್ತವತೆಯು ಭೂತಗಳ ಈ ವರ್ತಮಾನ ಸಂಗತಿಯಲ್ಲಿಲ್ಲ, ಭೂತಗಳ ಮಾತಿನಿಂದ ತಿಳಿದು ಬರುವ ಗತಿಸಿದ ಜೀವಂತ ನಾಟಕದಲ್ಲಿದೆ. ಮುದುಕನ ಮನೋರಂಗವೆ ಪ್ರಕೃತ ರಂಗಭೂಮಿಯೆಂದು ತಿಳಿದಾಗ ಮಾತ್ರ ನಾಟಕದ ಸ್ವಾಭಾವಿಕತೆ- ವಾಸ್ತವತೆಗಳ ಕಲ್ಪನೆ ಬರುತ್ತದೆ.

**ಅಭ್ಯಾಸ ೧.** ಕೆಳಗಿನ ವಾಕ್ಯಗಳಲ್ಲಿಯ ಅರ್ಥಸ್ವಾರಸ್ಯವನ್ನೂ ಉಕ್ತಿವೈಚಿತ್ರ್ಯವನ್ನೂ ಗಮನಿಸಿರಿ.

(೧) 'ಆ ಆಫೀಸಿನ ಗಂಟೆ ನನ್ನ ಎದೆಯೊಳಗೆ ಬಾರಿಸಿದ ಹಾಗಾಯ್ತು. (ಪು. ೪)

# II

(೨) 'ನಿನಗೂ ಮರಿಯಿತೊ ಏನ್ಮಣ್ಣೊ? ಮುಪ್ಪಿನಲ್ಲಿ ಉಪಯೋಗ ಏಳಲಿ ಅಂತ ಚಿಕ್ಕ ಹೆಂಡತಿನ್ನ ಮಾಡಿಕೊಂಡರೆ........' (ಪು. ೫)

(೩) 'ನನಗ ಬಂದ ಸ್ಥಿತೀನೆ ನಿಮ್ಮ ಅನುಭವದ ಎಲ್ಲಾ ಕೆಲಸಕ್ಕೂ ಬಂದರೆ ದೇವರೇ ನೋಡಿಕೊಬೇಕು.' (ಪು. ೭)

(೪) 'ಬುದ್ಧಿ ಭ್ರಂಶ ಆಗಿದೆಯೊ ನಿನಗೆ, ಏನು ಜೀವ ಬೇಡಾಗಿದೆಯೊ?' (ಪು. ೮)

(೫) 'ನೀನು ಭೂಮಿಯಲ್ಲಿ ಉಳಿದು ಮುದುಕನಾಗಿರುವೆ, ನಾನು ಜೀವವನ್ನು ಬಿಟ್ಟು ತರುಣನಾಗಿ ಉಳಿದಿರುವೆ.' (ಪು. ೯)

(೬) 'ಇಹಲೋಕದಲ್ಲಿ No Vacancy, ಎಂದು ನನಗೆ ಹೇಳಿದ್ದೆಯಲ್ಲವೆ? ಈಗ ಪರಲೋಕದಲ್ಲಿ ನಿನಗೆ No Vacancy.' (ಪು.೧೦)

(೭) 'ಮುನಸಿಪಾಲಟಿ ಚುನಾವಣೆಯಲ್ಲಿ, ಸತ್ತ ನನ್ನ ಹೋಟನ್ನು ಹಾಕಿಸಿಕೊಂಡು ನನ. ಪುನರ್ಜನ್ಮವನ್ನು ಕೊಟ್ಟ ಪರಬ್ರಹ್ಮ ನೀನು. (ಪು. ೧೧)

(೮) 'ಹೆಂಗಸರಿಗೆ ಬೆನ್ನು ತೋರುವ ಭೀಷ್ಮನೆಲ್ಲಿ? ಬೆನ್ನೆ ಇಲ್ಲದೆ ಹೆಂಗಸರನ್ನು ಎದುರಿಸುವ ನೀವೆಲ್ಲಿ?' (ಪು. ೧೨)

ಈ ಎಂಟೂ ವಾಕ್ಯಗಳಲ್ಲಿ ಕಂಡು ಬರುವ ಶಬ್ದಾಲಂಕಾರ, ಅರ್ಥಾಲಂಕಾರ ಹಾಸ್ಯ ವೈಚಿತ್ರ್ಯಗಳನ್ನು ಕಂಡು ಹಿಡಿಯಿರಿ.

II ಮುದುಕನನ್ನು ನಾಟಕಕಾರರು ಭೀಷ್ಮನಿಗೆ ಹೋಲಿಸುವುದರಲ್ಲಿ ಯಾವ ಯಾವ ಸಾದೃಶ್ಯಗಳನ್ನು ತೋರಿಸಿದ್ದಾರೆ? 'ಶರ-ಪಂಜರ'ದ ವೈಶಿಷ್ಟ್ಯವೇನು?

III 'ದೃಶ್ಯದಲ್ಲೆಲ್ಲ ಪ್ರಾಸಪ್ರಿಯತೆ ಕೋಡಿವರಿದಿದೆ' ಎಂದು ಮುನ್ನುಡಿಕಾರರು ಹೇಳಿದ್ದಾರೆ. ಅದನ್ನು ಉದಾಹರಣೆಗಳಿಂದ ತೋರಿಸಿರಿ.

IV ಮುದುಕನು ತನ್ನ ಜೀವಮಾನದಲ್ಲಿ ಮಾಡಿದ ಅನ್ಯಾಯ-ಅತ್ಯಾಚಾರಗಳೇನೇನು? ವಿವರಿಸಿರಿ.

V 'ಭೀಷ್ಮಪ್ರತಿಜ್ಞೆ' ಇಲ್ಲವೆ 'ಭೀಷ್ಮರ ಕೊನೆಗಾಲ' ಎಂಬ ವಿಷಯದ ಮೇಲೆ ಒಂದು ನಾಟ್ಯಘಟ ಬರೆಯಿರಿ. ಇದರಲ್ಲಿ ಭೀಷ್ಮರ ಪಾತ್ರವೊಂದೇ ರಂಗಭೂಮಿಯ ಮೇಲೆ ಕಂಡುಬರಬೇಕು.

# III

## ಸುರಾಸುರ ಯುದ್ಧ

**ಪರಿಚಯ ಮತ್ತು ವಿಮರ್ಶೆ:**— ಈ ನಾಟಕದ ಉದ್ದೇಶ ವಿನೋದ-ವಿಡಂಬನೆಗಳನ್ನೆಲ್ಲ ಮುನ್ನುಡಿಕಾರರು ಮನವರಿಕೆಯಾಗುವಂತೆ ವಿಶದವಾಗಿ ತಿಳಿಯಪಡಿಸಿದ್ದಾರೆ. 'ಕಾಂಗ್ರೆಸ್ಸಿನ ಆಡಳಿತದಲ್ಲಿ ಸುರುವಾದ ಸುರಾನಿರೋಧಕ ಚಳವಳಿಯನ್ನು ಇಲ್ಲ ಬರಿ ಬಣ್ಣ ಕೊಡುವದಕ್ಕೆಂದು ಮಾತ್ರ ಶ್ರೀರಂಗರು ಉಪಯೋಗಿಸಿದ್ದಾರೆ.' ಈ ನಾಟಕದಲ್ಲಿ 'ಸೃಷ್ಟಿ ಸ್ಥಿತಿ-ಸಂಹಾರಗಳ ಶಕ್ತಿ ಈಗ ಮಾನವನಲ್ಲಿಯೇ ಇದೆ' ಎಂಬ ವಿಚಾರವನ್ನು ಶ್ರೀರಂಗರು ತಿಳಿಸಬಯಸುತ್ತಾರೆ. ಇದರಲ್ಲಿ 'ವಿಡಂಬನೆಗೂ ಚಿತ್ರಶಕ್ತಿಗೂ ಆಸ್ಪದ ಹೆಚ್ಚು ಸಿಕ್ಕಿದೆ. ಏಕೆಂದರೆ ಜೀವನದ ವಾಸ್ತವಿಕ ಚಿತ್ರವು ಇಲ್ಲಿ ವ್ಯಂಗವಾಗಿ ಬರಲು ಸಾಧ್ಯವಾಗಿದೆ ಹೊರತು ನೇರವಾಗಿ ಬರುವಂತಿಲ್ಲ.' ಈ ನಾಟಕದಲ್ಲಿ ಶಿವನಬಾಯಿಂದ ಹೇಳಿಸುವ, "ನಾನು ಹಾಲಾಹಲ ಒಂದನ್ನೆ ದಕ್ಕಿಸಿದರೆ ಮಾನವರು ಎಷ್ಟೋ ಹಾಲಾಹಲಗಳನ್ನು ದಕ್ಕಿಸಿಕೊಂಡಿದ್ದಾರೆ," ಎಂಬ ಮಾತಿನಲ್ಲಿಯೂ ಅಗ್ನಿಗೆ ಯಮನು ಕೇಳುವ, "ಸರ್ವಭಕ್ಷಕನಾದ ನೀನು ಸ್ವಂತದ ಹಲ್ಲನ್ನು ತಿನ್ನುತ್ತ ಕುಳಿತಿರುವಿಯಾ" ಎಂಬ ಮಾತಿನಲ್ಲಿಯೂ ದೇವತೆಗಳ ಶೂನ್ಯ ಅಸ್ತಿತ್ವವನ್ನೂ ಸ್ವರ್ಗದ ಟೊಳ್ಳುತನವನ್ನೂ ತೋರಿಸಿದ್ದಾರೆ. ವಿಜ್ಞಾನದ ಮುಂದೆ ದೇವತೆಗಳ ಆಟವು ನಡೆಯದೆಂದು ಹೇಳಿ ಮರ್ತ್ಯನು ಅವರದೊಂದು ಸರ್ಕಸು ಹೂಡುತ್ತಾನೆ.

ಪೌರಾಣಿಕ ಸಂಗತಿಗಳ ಮೇಲೆ ನಿರ್ಮಿಸಿದ ಹಾಸ್ಯದ ಬಗೆಯನ್ನೂ ಮಾತುಮಾತಿನ ಮಿಂಚಾಟವನ್ನೂ ಇಲ್ಲಿ ನೋಡಬೇಕು.

**ಅಭ್ಯಾಸ ೧:** ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

೧. ಈವೊತ್ತು ನಮಗೆ ದೇವತೆಗಳ ಅವಶ್ಯಕತೆ ಯಾಕೆ ಇಲ್ಲ?

೨. ಇಲ್ಲಿ ಒಟ್ಟು ಎಷ್ಟು ದೇವತೆಗಳು ಬಂದಿದ್ದಾರೆ? ಒಬ್ಬೊಬ್ಬ ದೇವತೆಯ ಮುಖ್ಯ ಕಾರ್ಯವೇನು? ಆ ದೇವತೆಯ ಬಗ್ಗೆ ನಿಮಗೆ ಗೊತ್ತಿದ್ದ ಪೌರಾಣಿಕ ಸಂಗತಿಗಳನ್ನು ಉದಾಹರಿಸಿರಿ.

೩. ಈ ದೃಶ್ಯದಲ್ಲಿ ಯಾವ ಪಾತ್ರದ ಯಾವ ಮಾತು ನಿಮಗೆ ಹೆಚ್ಚು ಮೋಜೆನಿಸುತ್ತವೆ? ಏಕೆ?

೪. 'ಅಮರಾವತಿಯಲ್ಲಿ ಅಗಸ್ಟ ಫರ್ಸ್ಟ' ಈ ಪದ ಪ್ರಯೋಗದಲ್ಲಿ ಅಡಗಿರುವ ವಿನೋದವನ್ನು ತೋರಿಸಿರಿ. ಅಗಸ್ಟ ಫರ್ಸ್ಟಕ್ಕೂ ಅಮರಾವತಿಗೂ ಸಂಬಂಧವನ್ನು ನಾಟಕಕಾರರು ಹೇಗೆ ಹಚ್ಚಿದ್ದಾರೆ?

ii ವಿಡಂಬನೆಯ ಬಗ್ಗೆ ಕೆಳಗಿನ ಟಿಪ್ಪಣಿ ಓದಿಕೊಳ್ಳಿರಿ —

ಇಂಗ್ಲಿಷಿನಲ್ಲಿ ಇದಕ್ಕೆ (caricature) ಎಂಬ ಪದವು ಹೆಚ್ಚು ಸಮರ್ಪಕವಾಗುತ್ತದೆ. ಒಂದು ವ್ಯಕ್ತಿಯ ಲೋಪದೋಷಗಳನ್ನು ಅನೇಕ ಪ್ರಕಾರಗಳಿಂದ ಆಡಿ ತೋರಿಸಬಹುದು. ಅವನು ಶತದಡ್ಡನಿದ್ದಾಗ 'ಮಹಾಪಂಡಿತರು!' ಎಂದು ವ್ಯಂಗ್ಯದಿಂದ ಆಡಿ ತೋರಿಸಬಹುದು. ಇಲ್ಲವೆ- 'ಬ್ರಹ್ಮನಿಗೇ ತಲೆಯಿದ್ದಲ್ಲವೇನೊ ಇಂತಹ ಶತಮೂರ್ಖನನ್ನು ಹುಟ್ಟಿಸುವುದಕ್ಕೆ' ಎಂದೂ ವಿಡಂಬನಾತ್ಮಕವಾಗಿ ಹೇಳಬಹುದು. ವ್ಯಂಗ್ಯ ಹಾಸ್ಯಕ್ಕೂ ವಿಡಂಬನಾತ್ಮಕ ಹಾಸ್ಯಕ್ಕೂ ಇರುವ ಭೇದ ತಿಳಿಯಿತೆ? ವಿಡಂಬನಕಾರನಿಗೆ ಸಹಾನುಭೂತಿ ಕಡಿಮೆ ಜುಗುಪ್ಸೆ ಹೆಚ್ಚು, ಟೀಕಿಸುವ ವ್ಯಕ್ತಿಯ ಬಗ್ಗೆ. ಜುಗುಪ್ಸೆಯೊಡನೆ ಉದ್ವೇಗವೂ ಹೆಚ್ಚು ಕಂಡು ಬರುತ್ತದೆ. ಗಣಪತಿಯ ಚಿತ್ರವನ್ನು ಬರೆಯ ಹೋಗಿ ಬರಿ ಅವನದೊಂದು ಡೊಳ್ಳು ಹೊಟ್ಟೆ, ಹರದಾರಿಯುದ್ದ ಸೊಂಡಿ ಎರಡನ್ನೆ ಎತ್ತಿ ತೋರಿಸಿ ಉಳಿದ ಅವಯವಗಳನ್ನು ನಿಮಿತ್ತ ಮಾತ್ರಕ್ಕೆ ತೋರಿಸಿದಾಗ ಅದು ಗಣಪತಿಯ ವಿಡಂಬನವಾಗುತ್ತದೆ. 'ಕಲ್ಲು ದೇವರಿಗಿಂತ ಕಲೆಕ್ಟರನನ್ನು ಪ್ರಾರ್ಥಿಸಿಕೊಂಡರೇ ಏನೊ ಕೆಲಸವಾಗಬಹುದು'—ಎಂಬ ಮಾತಿನಲ್ಲಿ ದೇವತ್ವದ ಬಗ್ಗೆ ವಿಡಂಬನೆಯಿದೆ. ಶ್ರೀ. ಕಾರಂತರ 'ಗ್ನಾನ' ಎಂಬ ಪುಸ್ತಕ ಓದಿರಿ. ವಿಡಂಬನೆಯ ಪೂರ್ಣ ಕಲ್ಪನೆಯಾಗುತ್ತದೆ, ನಿಮಗೆ. ಸಮಾಜದ ಬೇರೆ ಬೇರೆ ವರ್ಗದ ವ್ಯಕ್ತಿಗಳನ್ನು ಬಯಲಿಗೆಳೆದು ಅವನ್ನು ಹೇಗೆ ಅಪಹಾಸ್ಯಕ್ಕೆ ಗುರಿಮಾಡುವದೆಂಬುದು ಕಾಣುತ್ತದೆ. ವಿಡಂಬನೆಗೆ ಪರಿಜೋಡಿಯಾಗಿ ಅಣಕ (parody) ಮೂದಲಿಕೆ (ridicule) 'ಛೀ'ಕಾರ (vituperation) ತೀವ್ರನಿಂದೆ (ಅಪಹಾಸ್ಯ) (satire) ಗಳು ಬರುವವು. ಇದಲ್ಲದೆ ಕನ್ನಡದಲ್ಲಿಯೆ 'ಜಕ್ಕುಲಿಕೆ,' 'ಛೇಕೋಕ್ತಿ' 'ವಕ್ರೋಕ್ತಿ' ಗಳೆಂಬ ಉಪಹಾಸದ ವಿವಿಧ ಪ್ರಕಾರಗಳಿವೆ. ಈ ದೃಶ್ಯದಲ್ಲಿ ವಿಡಂಬನೆ ಎಲ್ಲೆಲ್ಲಿ ತಲೆದೋರಿದೆ, ತೋರಿಸಿರಿ.

iii ಇಂಗ್ಲಿಷಿನಲ್ಲಿ Comedy, Farce, Burlesque ಎಂಬ ಮೂರು ಪ್ರಕಾರದ ನಗೆಯ ನಾಟಕಗಳಿಗೆ ನಾವು ಸ್ಥೂಲವಾಗಿ 'ಪ್ರಹಸನ' ಎಂದೇ ಹೇಳುವೆವು. ಮೇಲಿನ ಪ್ರಕಾರ ವಿಭೇದ ಮಾಡುವುದಾದರೆ ಕನ್ನಡದಲ್ಲಿ ಹಾಸ್ಯಪ್ರಧಾನ ನಾಟಕ ಇಲ್ಲವೆ 'ಪ್ರಹಸನ' (comedy) 'ಹುಚ್ಚಾಟ' (Farce) 'ಅಣಕಾಟ' (Burlesque) ಎಂದು ಹೇಳಬಹುದು.

ಕೈಲಾಸಂ ಶ್ರೀರಂಗ ಮತ್ತು ಕಾರಂತರ ದೊಡ್ಡ ನಾಟಕಗಳು (ಉದಾ-ಹೋಂರೂಲು, ಹರಿಜನ್ವಾರ, ಗರ್ಭಗುಡಿ) 'ಕಾಮೆಡಿ' ಗಳೆಂದು ಸ್ಥೂಲವಾಗಿ ಹೇಳಬಹುದು. ಶ್ರೀ. ಕಾರಂತರ, ಬೇಂದ್ರೆಯವರ ಶ್ರೀರಂಗರ, ಗೋಕಾಕರ, ಅ. ನ. ಕೃ. ಅವರ, ಮುಗಳಿಯವರ 'ಎನ್ಕೆ' ಅವರ-ನಾರದನ ಗರ್ವಭಂಗ, ತಿರುಕರಪಿಡುಗು, ಯಮುನಸೋಲು, ವಿಮರ್ಶಕವೈದ್ಯ, ಮದುವೆಯೊ ಮನೆಹಾಳೊ, ಅತಿಥಿದೇವ, ಬಾರ್‌ರೂಂ- ಇವೆಲ್ಲವೂ ಹುಚ್ಚಾಟಗಳೆಂದು ಹೇಳಬಹುದು.

ಶ್ರೀರಂಗರ 'ಮನೆಯಲ್ಲಿ ಮಹಾಸಭೆ,' ಎನ್ಕೆಯವರ 'ಬೆಳ್ಳಿಯ ಹಬ್ಬ' ಮೊದಲಾದುವು 'ಅಣಕಾಟ" ಗಳೆಂದು ಹೇಳಬಹುದು. ಈ ಸಂಗ್ರಹದಲ್ಲಿ ಸುರಾಸುರ ಯುದ್ಧ ಪ್ರಹಸನ, 'ಉತ್ತರರಂಗ' ವು ಹುಚ್ಚಾಟ 'ಪ್ರಪಂಚಪ್ರವಾಹ' ವು ಅಣಕಾಟದ ಮಾದರಿಗಳಾಗಿವೆ.

iv ಕೆಳಗಿನ ವಾಕ್ಯಗಳನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿರಿ:—

(೧) 'ಸೃಷ್ಟಿ-ಸ್ಥಿತಿ-ಸಂಹಾರಗಳ ಶಕ್ತಿ ಈಗ ಮಾನವನಲ್ಲಿಯೆ ಇದೆ.'

(೨) ನಾನು ಹಾಲಾಹಲವೊಂದನ್ನೆ ದಕ್ಕಿಸಿದರೆ ಮಾನವರು ಎಷ್ಟೊ, ಹಾಲಾಹಲಗಳನ್ನು ದಕ್ಕಿಸಿಕೊಂಡಿದ್ದಾರೆ.

(೩) 'ಸುರಲೋಕವನ್ನು ಸಂಹರಿಸಿ ಮಾನವರಾಗಿ ಅವತರಿಸಿರಿ.'

## ಉತ್ತರ-ರಂಗ

**ಪರಿಚಯ** ಮತ್ತು **ವಿಮರ್ಶೆ:** ಶ್ರೀರಂಗರ 'ಪೂರ್ವರಂಗ' ವೆಂಬ ಮುಂಚಿನ ಒಂದು ಏಕಾಂಕ ನಾಟಕ ಹಾಗೂ ಸಂಗ್ರಹದ ಉತ್ತರ ರೂಪವಾಗಿ ಈ ಏಕಾಂಕ ನಾಟಕ ಹಾಗೂ ಸಂಗ್ರಹ ಬಂದಿವೆ. ಆದರೆ ಈ ಹೊಂದಿಕೆಯನ್ನು ಬೇರಿರಿಸಿ ನಾಟಕದ ಹೆಸರಿನ ಮಟ್ಟಿಗಷ್ಟೆ ವಿಚಾರಿಸಿದರೂ ಇದು

ಸಮರ್ಪಕವಾಗಿಯೇ ಇದೆ. ಏಕೆಂದರೆ ಇಲ್ಲಿ ಕಂಡು ಬರುವ ಸನ್ನಿವೇಶ ವೇನು? ಒಂದು ನಾಟಕ ಕಂಪನಿಯ ಆಟವೊಂದು ಮುಗಿದ ಮೇಲೆ ಗ್ರೀನ ರೂಮು-ಸ್ಟೇಜುಗಳಲ್ಲಿ ನಡೆವ ಉತ್ತರರಂಗ. ಕಂಪನಿನಾಟಕದ ಭರತ ವಾಕ್ಯದ ನಂತರದ ವಿಸರ್ಜನಾಕಾರ್ಯವೇ ಇಲ್ಲಿ ಪ್ರಸ್ತುತ ನಾಂದಿಯಾಗಿದೆ. ಮುನ್ನುಡಿಕಾರರೇ ಹೇಳುವಂತೆ—" ನಾಟಕಕಾರ, ಮಾಲಕ, ನಟ ನಗೆ ಗಾರ ಇವರೆಲ್ಲರ ನಡುವೆ ಒಂದು ನಾಟಕದ ಪ್ರಯೋಗವನ್ನು ಕುರಿತು ನಡೆ ಯುವ ಸಂಭಾಷಣೆಗಳಲ್ಲಿ ನಾಟಕ–ಸಿನೇಮಾಗಳ ಸಂಬಂಧ, ನಾಟಕದಲ್ಲಿ ಕಲೆ ಹಾಗು ನೀತಿಯ ಸಮಸ್ಯೆ, ನಟರ ನೀತಿವಿಚಾರ-ಇವೇ ಮೊದಲಾದ ಪ್ರಶ್ನೆಗಳ ತೊಡಕನ್ನು ನಾಟಕಕಾರರು ಸುಂದರವಾಗಿ ಚಿತ್ರಿಸಿದ್ದಾರೆ."

ಇಲ್ಲಿ ಶೈಲಿಯ ಒಂದೆರಡು ವೈಶಿಷ್ಟ್ಯಗಳನ್ನು ನೀವು ಕಾಣುವಿರಿ: ಭಲೇಲೇಲೆ ಸಾರಥೀ, ನಾಟಕ ಕಂಪನೀ ಮಾರುತಿ' ಈ ಪ್ರಕಾರದ ಅನು ಪ್ರಾಸವು ಛಲದಿಂದ ಬಂದು ಕೂಡಿದರೂ ಒಂದು ಉದ್ದೇಶವನ್ನು ಈಡೇರಿ ಸುತ್ತದೆ. ಅದೆಂದರೆ ಕಂಪನಿ ನಾಟಕಗಳ ಬಗ್ಗೆ ಒಂದು ವಿಹಸಿತವನ್ನೂ ಅಪಹಸಿತವನ್ನೂ (Comic & Ludicrous) ಉಂಟುಮಾಡುವುದು. ಕಂಪನಿ ನಟರ ಅಜ್ಞಾನವನ್ನು ಕುರಿತು ನಾಟಕಕಾರರು ಉಂಟುಮಾಡುವ ಒಂದು ವಿಡಂಬನಾತ್ಮಕ ಹಾಸ್ಯವನ್ನು ನಟವರ್ಯನಾದ ಗುರುರಾಜನ ಮಾತಿನಲ್ಲಿ ನೀವು ಕಾಣಬಹುದು. (ಉದಾ:- ಪು. ೧೦ ರ ಮೇಲಿನ ಗುರು ರಾಜನ ಮಾತು). ಇಂದಿನ ಕಂಪನಿಮಾಲಕನ ಅವಸ್ಥೆ ಹೇಗಿರುತ್ತದೆಂಬ ಬಗ್ಗೆಯೂ ನಗೆಯಲ್ಲಿ ಹೊಗೆಯನ್ನೂ ಹೊಗೆಯಲ್ಲಿ ಕಂಬನಿಯನ್ನೂ ಕೂಡಿಸಿ ಹೇಳುವ ಮಾರ್ಮಿಕವಾದ ಮಾಲಕನ ಮಾತಿನಲ್ಲಿಯೇ ಹೇಳಿದ್ದಾರೆ. (ಉದಾ: ಪು. ೧೧. ಮಾಲಕ:- ಮಹಾಸ್ವಾಮಿ ಹಾಸಿಗೆ ಸುರಳೀ........ ಕುಣಿದಾಡೋದಕಿಂತ.) ಅಂತೂ ಈನಾಟಕದ ಮಾತಿನಲ್ಲಿಯ ನಗೆಯಲ್ಲಾ ಸ್ವಲ್ಪ ಚುರುಕಾಗಿದೆ.

ಇಡಿಯ ನಾಟಕವನ್ನು ಓದಿದ ಮೇಲೆ ಕಂಪನಿಯ ಅವಸ್ಥೆ-ವ್ಯವಸ್ಥೆ ಗಳನ್ನು ತಮ್ಮ ಬಿಂಬಗ್ರಾಹಕ ಸೂಕ್ಷ್ಮ ಕಣ್ಣಿನಲ್ಲಿ ಹಿಡಿದು ಹಾಕುವ ಅವರ ನಿರಕ್ಷಣದ ತೀಕ್ಷ್ಣತೆಯನ್ನೂ ಕನ್ನಡ ರಂಗಭೂಮಿಯ ಬಗ್ಗೆ ಅವರು ಮಾಡಿರುವ ವಿಚಾರ ಸಂದೋಹವನ್ನೂ ನಾವು ಗಮನಿಸಬೇಕು.

ಇಲ್ಲಿಯೂ ಹಾಸ್ಯವು ವಿಡಂಬನೆ, ದ್ವಂದ್ವಾರ್ಥದ ಶಬ್ದಪ್ರಯೋಗ, ನಟ-ಮಾಲಕರ ಗ್ರಾಮ್ಯವಾಣಿ, ಮಾಲಕನ ಕಂಗಾಲತನ ಇವೇ ಮೊದಲಾದ ಅಂಶಗಳಲ್ಲಿ ಕಂಡು ಬರುತ್ತದೆ.

ಈ ನಾಟಕದ ವ್ಯಾಪಕತೆಯು ಬರಿ ಒಂದು ಕಂಪನಿಯ ಮಟ್ಟಿಗೆ ಇದೆಯೆಂದೆನಿಸುತ್ತದೆ. ಆದರೆ ಇಂದಿನ ಕರ್ನಾಟಕದ ತುಮುಲ ಸಮಸ್ಯೆಗಳಲ್ಲಿ ಇದು ಮೊದಲನೆಯದೆಂದರೆ ಅತ್ಯುಕ್ತಿಯಲ್ಲ. ಅಂತೆ ಈ ನಾಟಕ ಆ ಸಮಸ್ಯೆಗಾಗಿಯೇ ಮೀಸಲಾಗಿದ್ದರೆ ನಾಟಕಕಾರರ ಪರಿಶ್ರಮ ಸಾರ್ಥಕವೆಂದೇ ಹೇಳಬೇಕು.

**ಅಭ್ಯಾಸ** I ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

೧ ಮೂಲಕಾಂಶ, ಕಲಿಯುಗದ ಕಾಳಿದಾಸ ಪ್ರಭೊ, ಡಾಮೀಜಿಸ್- ಈ ಪದಪ್ರಯೋಗಗಳಲ್ಲಿಯ ಹಾಸ್ಯವನ್ನು ವಿವರಿಸಿರಿ.

೨ ಸಿಂಗ, ಗುರುರಾಜ, ಮಾಲಕ ನಾಟಕನಾರ ಇವರ ಮಾತುಗಳಲ್ಲಿ ನೀವು ಮೆಚ್ಚಿದ ಉತ್ತಮ ಹಾಸ್ಯದ ಒಂದೊಂದು ಉದಾಹರಣೆಯನ್ನಿಟ್ಟು ಪರಸ್ಪರ ವಾಕ್ಯದಲ್ಲಿ ಕಾಣುವ ವ್ಯತ್ಯಾಸವನ್ನು ಸೂಚಿಸಿರಿ.

೩ ಇಂದಿನ ಕಂಪನಿಗಳ ದುರವಸ್ಥೆಗೆ ಈ ನಾಟಕದಿಂದ ಕಂಡು ಬರುವ ಕಾರಣಗಳನ್ನು ಕೊಡಿರಿ.

II ಕೆಳಗಿನ ಮಾತುಗಳನ್ನೂ ಅವುಗಳ ಬಗ್ಗೆ ನಾಟಕಕಾರರ ಉದ್ದೇಶವನ್ನೂ ವಿವರಿಸಿರಿ:-

(i) ಈಗ ನನಗ ತಿಳಿತು 'ಉಗಳಬಾರದು' ಅನ್ನೋ ನೋಟೀಸ ಯಾಕ ಹಚ್ಚತಾರೆ ಅಂತ.

(ii) ನಾಟಕಾ ಆಡೋರ ಸುಖ ಓದಿದವರಿಗೇನು ಗೊತ್ತು ?

(iii) ಊರೂರಿಗೆ ಫರದೆ ಜಪ್ತ ಮಾಡಿದರೂ ಆ ಕನಡಿ ಮುಚ್ಚಿತ್ತಿದ್ದಿರಿ—ನನಗ್ಗೊತ್ತಿಲ್ಲ ?

(vi) ಹೆಣ್ಣುಪಾರ್ಟ ಮಾಡಿ ಮಾಡಿ ಹೆಂಗಸಿನ ಹಾಂಗ ನಡಕ ಬಾಯಿ ಹಾಕೋಚಟಾನೇ ಬಿದ್ದೈತಿ.

(v) 'ಬ್ಯಾಡ' ಅಂದರೂ ಮುಕಾ ತೋರಿಸತೈತಿ ಈ ಮುಂಗ್ಯಾನ ಕುಲಿಬ್ಬು ಅಂತ!

III ‘ ಕನ್ನಡ ರಂಗಭೂಮಿಯ ಭವಿತವ್ಯ ’ ಎಂಬ ವಿಷಯದ ಮೇಲೆ ಒಂದು ಚಿಕ್ಕ ನಿಬಂಧ ಬರೆಯಿರಿ. ಇಲ್ಲವೆ ‘ ನಾನು ನೋಡಿದ ಕಂಪನಿ ನಾಟಕ ’ ಎಂಬ ವಿಷಯದ ಮೇಲೆ ಒಂದು ಹರಟೆ ಬರೆಯಿರಿ.

## ಪ್ರಪಂಚಪ್ರವಾಹ ಇಲ್ಲವೆ
## ಅನುಭವದ ಅದ್ವೈತ

**ಪರಿಚಯ ಮತ್ತು ವಿಮರ್ಶೆ:-** ‘ಮನೆಮನೆಯಲ್ಲಿಯೂ ಇದೇ ಹಾಡು’ ಎಂದು ಮುನ್ನುಡಿಕಾರರು ಹೇಳುವಂತೆ ಇದೊಂದು ವಾಕ್ಯದಲ್ಲಿಯೇ ಈ ದೃಶ್ಯದ ಸಾರಾಂಶವಡಗಿದೆ; ಅಥವಾ ಇದಕ್ಕೂ ಸಂಗ್ರಹವಾಗಿ ನಾಟಕಕಾರರು ಇದಕ್ಕಿಟ್ಟ ‘ ಅನುಭವದ ಅದ್ವೈತ ’ ಎಂಬ ಹೆಸರೇ ಸಾಕು. ‘ ಈಕೆ ’ ಗೆ ಜಡ್ಡು, ‘ ಆತ ’ ನಿಗೆ ಜಡ್ಡು. ಈಕೆಯ ಗಂಡನಿಗೆ ‘ ಆಫೀಸಿನ ’ ಗಡಿಬಿಡಿ; ಆತನ ಹೆಂಡತಿಗೆ ಮನೆಗೆಲಸದ ಗಡಿಬಿಡಿ. ಈಕೆಯ ಗಂಡನ ಮನೆಯೂ ಆತನ ಮನೆಯೂ ಒಂದೇ ದೊಡ್ಡಮನೆಯಲ್ಲಿ ಎರಡು ಭಾಗ ( partition ) ಮಾಡಿದ ಹಾಗಿವೆ. ‘ ಈಕೆ ’ ಮತ್ತು ‘ ಆತ ’ ರೋಗಿಗಳು, ಹೊರಗೆ ಬರುವಂತಿಲ್ಲ. ಸರಿ, ಇಷ್ಟು ಒಂದು ಸನ್ನಿವೇಶವನ್ನು ಕಲ್ಪಿಸಿಕೊಳ್ಳಿರಿ. ನಾಟಕದ ಮೋಜು ಎಲ್ಲಿದೆಯೆಂಬುದು ತಾನೇ ಗೊತ್ತಾಗುವುದು. ಅಲ್ಲವೆ ? ಎರಡು ಪ್ರಪಂಚಗಳ ಅನುಭವದ ಅದ್ವೈತಕ್ಕೆ ಇನ್ನಷ್ಟು ಹೊಂದಿಕೆಯಾಗುವಂತೆ ಇಬ್ಬರು ಮನೆಯಲ್ಲಿಯೂ ಒಂದೊಂದು ರೋಗಿ. ಇಷ್ಟೇ ಅಲ್ಲ, ಅದ್ವೈತಾನುಭವದ ಪರಮಾವಧಿ ಎಲ್ಲಿದೆ ಗೊತ್ತೊ ? ಈಕೆಯ ಗಂಡ, ಒಳಗಿರುವ ಈಕೆಯೊಡನೆ; ಆತನ ಹೆಂಡತಿ, ಒಳಗಿರುವ ಆತನೊಡನೆ ಮಾತಾಡಿದರೂ ಈಕೆಯ ಗಂಡ ಆತನ ಹೆಂಡತಿಯೊಡನೇ, ಆಚೆಗೆ ಮುಖ ತಿರುವಿ, ಮಾತನಾಡುತ್ತಿರುವಂತೆ ತೋರುತ್ತದೆ. ಅಂದರೇನು ದಾಂಪತ್ಯಾನುಭವದ ಅದ್ವೈತವು ಒಬ್ಬ ಗಂಡ ಇನ್ನೊಬ್ಬ ಹೆಂಡತಿಯೊಡನೆ ಮಾತಾಡಿದರೂ ಆ ಗಂಡನು ತನ್ನ ಹೆಂಡತಿಯೊಡನೆ ಮಾತನಾಡಿದಂತೆಯೇ ಇರುತ್ತದೆ, ಎಂದರ್ಥ.

# IX

ಇಲ್ಲಿ ಎರಡೂ ವ್ಯಕ್ತಿಗಳ ಮಾತು ಮಾತಿನ ಕೊನೆಯ ಎಳೆಯನ್ನು ಸೂಕ್ಷ್ಮವಾಗಿ ನೋಡಿರಿ. ಅದು ಮತ್ತೊಂದು ವ್ಯಕ್ತಿಯ ಮಾತಿಗೆ ಹೊಸದಾಗಿ ಹುಟ್ಟಿಕೊಳ್ಳುತ್ತದೆ.

ಈ ದೃಶ್ಯದಲ್ಲಿ ಕಂಡುಬರುವ ಹಾಸ್ಯದ ಜೀವಾಳವು ರಂಗಸೂಚನೆಯಲ್ಲಿಯೇ ಇದೆಯನ್ನಬಹುದು. ಅದರ ಮೂಲಕ ಒಂದು ಸುಂದರ ಹಾಸ್ಯ ಪ್ರಸಂಗ ಸನ್ನಿವೇಶವು ನಿರ್ಮಾಣವಾಗಿದೆ. ಅಂತೆ ಈಕೆಯ ಗಂಡ, ಆತನ ಹೆಂಡತಿ ಇಬ್ಬರ ಬೆನ್ನೂ ಎದುರುಬದರಾಗಿ ಹಸೇ ತಮ್ಮ ತಮ್ಮ ಮಾತನ್ನಾಡಿಕೊಂಡರೂ ಅವರ ಸಂಬಂಧ ಸೂತ್ರವು ಸಹಜ. ಹತ್ತಿ ಹಾಸ್ಯದ ಸೊಗಸು ತೇಲಿ ಬರುತ್ತದೆ.

ಇಲ್ಲಿ ಪ್ರತ್ಯೇಕ ಒಂದು ಕಥಾವಸ್ತು ಎಂದು ನಿಮಗೆ ಕಾಣದಿದ್ದರೂ ಉತ್ಕೃತ ಪ್ರಸಂಗ ಪ್ರವಾಹವೇ ನಿಮ್ಮೆದುರಿಗೆ ಶುಭ್ರ ಗಂಗೆಯಂತೆ ಹರಿಯುತ್ತದೆ. ಆ ಪ್ರವಾಹದಲ್ಲಿ ಹಾಸ್ಯವು ಬುದ್ಬುದವಾಗಿ, ನೊರೆಯಾಗಿ ತೆರೆಯಾಗಿ ಕಿವಿಗೆ ಇನಿದಾಗಿ ಕಣ್ಣಿಗೆ ಚೆಲುವಾಗಿ ಮನಕೆ ಹಿತವಾಗಿ ಪರಿಣಮಿಸುತ್ತದೆ. ಒಮ್ಮೆ ಈಕೆಯ ಗಂಡನ ಆತನ ಹೆಂಡತಿಯ ಮಾತಿನ ಚಮತ್ಕಾರವು ನಮ್ಮ ಬಾಯ್ದೆರೆಯ ಮೇಲೆ ಮುಗುಳು ನಗೆಯನ್ನು ಸುಳಿಸಿದರೆ ಈಕೆಯ ಗಂಡನು ಆಫೀಸಿನ ಗಡಿಬಿಡಿಯಲ್ಲಿ ಗಡಿಯಾರದ ಸ್ಪ್ರಿಂಗು ಹರಿದುಕೊಂಡು ಹಣೆಯ ಮೇಲೆ ಕನ್ನಡಕವಿಟ್ಟು ಊರ ತುಂಬ ಹುಡುಕುತ್ತ, ತನ್ನ ಬುಡಕ್ಕೆ ಹಾಕಿಕೊಂಡ ರುಮಾಲವನ್ನು ಕಾಣದೆ ಸಂಶೋಧ ನಡೆಸುತ್ತ, ರಂಗಭೂಮಿಯ ಮೇಲೆ ಕೃತಿ ( action ) ಯ ಗೊಂದಲವನ್ನೆ ಎಬ್ಬಿಸುವಾಗ ನಾವು ಖೊಕ್-ಖೊಕ್ ಎಂದು ನಕ್ಕು ‘ಉಚಿತ’ವನ್ನು ತೋರುತ್ತೇವೆ. ಹೆಂಗಸರು ಮನೆಗೆ ಬರದ ನೆವ, ಗಂಡ ಆಫೀಸಿನ ನೆವಗಳ ಬುಡದಲ್ಲಿ ಪ್ರೀತಿ ಬದ್ಧವಾಗಿರುತ್ತದೆಂದು ಮನಶ್ಶಾಸ್ತ್ರಕಾರರು ಹೇಳುತ್ತಾರೆ. ಈ ‘ನೆವ’ಗಳನ್ನು ಬಿಚ್ಚಿ ತೋರಿಸುವುದಕ್ಕೆ ಇಲ್ಲಿ ಹಗುರವಾಗಿ ವಿಡಂಬನೆಯನ್ನು ಬಳಸಿಕೊಂಡ ನಾಟಕಕಾರರ ವಿಡಂಬನೆಯೆಂದರೂ ಸುಕುಮಾರವಾಗಿದೆ, ಕಟುವಾಗಿಲ್ಲ ‘ನರಕದಲ್ಲಿ ನರಸಿಂಹ’ದಂತೆ.

ಇದರಲ್ಲ ರಂಗಸೂಚನೆಯ ಎರಡು ಪಾತ್ರಗಳ ಆಚಾರ-ವಿಚಾರಗಳಲ್ಲಿ ಮಾತು-ಕತೆಗಳಲ್ಲಿ ಕಂಡುಬರುವ ವಾಸ್ತವಿಕತೆಯನ್ನು ಗಮನಿಸಿರಿ.

**ಅಭ್ಯಾಸ: I** ಕೆಳಗೆ ತೋರಿಸಿರುವ ಒಂದೆರಡು ಹಾಸ್ಯದ ಪ್ರಕಾರಗಳನ್ನು ನೋಡಿರಿ:—

೧. ಪುಟ ೯— **ಆತನ ಹೆಂಡತಿ:** ರೂಢಿಯಾದವರೂ ! ಎಲ್ಲಿದೆ ನಿಮಗೆ ಮನೆಯ ಹೆಂಡತಿ ಜೋಡಿ ಮಾತಾಡೋದಕೆ?..................( ಇಲ್ಲಿಂದ ) **ಈಕೆಯ ಗಂಡ** .................. ತೋಳಿಗೇನು ಧಾಡಿ ಆಗಿದೆ. ಅಂತೀನಿ. ( ಇಲ್ಲಿಯ ವರೆಗೆ )

೨. ಪು. ೭ ಈ. ಗಂ:– 'ಕಣ್ಣಿಗೆ ಕನ್ನಡಕ ಇಲ್ಲದೆ ನನಗೆ ಕಾಣಿಸೋದಿಲ್ಲ, ಆದರೆ ನನ್ನ ಹಣೆಯ ಮೇಲೆ ಇದ್ದದ್ದು ನಿನಗಾದರ ಕಾಣಿಸಿತೊ ಇಲ್ಲೊ?

೩. ಪು. ೧೨. ಈ. ಗಂ.:–........ ಆಫೀಸಿನ ಕೆಲಸಬಿಟ್ಟು ಹೆಂಡತಿ ಜೋಡಿ ಚೆಲ್ಲಾಟ ಆಡುವಷ್ಟು ನನಗೆ ತಲೆ ಇಲ್ಲಂತ ತಿಳಿದಿಯೇನು ?.... ಅದಕ್ಕ ಹೇಳತೀನಿ-ತಲೆ ಇದೆ ನನಗೆ, ಆದರೆ ಆ ತಲೆಗೆ ಬೇಕಾದ ಹಾಳು ರುಮಾಲು ಎಲ್ಲಿದೆ ಅಂತ ಕೂಗಿಕೊಳ್ಳುತಾ ಇದ್ದೀನಿ.

II ಇಂಗ್ಲಿಷಿನಲ್ಲಿ ಹಾಸ್ಯದಲ್ಲಿ ನಾಲ್ಕು ಪ್ರಕಾರಗಳನ್ನು ಮಾಡುತ್ತಾರೆ. ಅವಾವುವೆಂದರೆ:—

Ludicrons, Comic, Humour, Wit ಎಂದು ಅದೇ ಪ್ರಕಾರವಾಗಿ ಸಂಸ್ಕೃತ ಅಲಂಕಾರಿಕರೂ ಹೀಗೆ ವಿಭಾಗಿಸಿದ್ದಾರೆ:—

ಅತಿ ( ಇಲ್ಲವೆ ಅಪ ) ಹಸಿತ, ವಿಹಸಿತ, ಹಸಿತ, ಸ್ಮಿತ ಎಂದು. ಇವುಗಳಲ್ಲಿ 'ಸ್ಮಿತ'ವನ್ನು, ಎಂದರೆ ಕೇವಲ ಒಂದು ಮುಗುಳ್ನಗೆಯನ್ನು ಹುಟ್ಟಿಸುವಂತಹುದೆ, ಉತ್ತಮ ಹಾಸ್ಯವೆಂದು ಹೇಳುತ್ತಾರೆ. ಈ ನಾಟಕದಲ್ಲಿ ನಿಮಗೆ ಎಷ್ಟು ಪ್ರಕಾರದ ಹಾಸ್ಯಗಳು ತೋರುತ್ತವೆ, ಸೋದಾಹರಣವಾಗಿ ವಿವರಿಸಿರಿ.

III ಕೆಳಗಿನ ಪ್ರಶ್ನೆಗಳಿಗೆ ಉತ್ತರ ಕೊಡಿರಿ:—

೧ ನಾಟಕಕಾರರ ಕಲಾಚಾತುರ್ಯವು ಎಲ್ಲೆಲ್ಲಿ ಕಂಡು ಬರುತ್ತದೆ?

೨. ಸಾಹಿತ್ಯದಲ್ಲಿ 'ವಾಸ್ತವತೆ' ಯೆಂದರೇನು? ವಾಸ್ತವತೆಯು ಈ ದೃಶ್ಯದಲ್ಲಿ ಎಷ್ಟರ ಮಟ್ಟಿಗೆ ಮೂಡಿದೆ?

೩. 'ತಲೆತುಂಬ ವಿಚಾರ-ಹೊಟ್ಟೆತುಂಬ ನಗೆ' ಇದು ಶ್ರೀರಂಗರ ಶೈಲಿ ಯೆಂದು ಹೇಳುತ್ತಾರೆ. ಈ ಮಾತಿಗೆ ಇದರಲ್ಲಿ ಉದಾಹರಣೆಗಳನ್ನು ತೋರಿಸಿರಿ.

೪. ಶ್ರೀರಂಗರ 'ಸ್ತ್ರೀ' ಪಾತ್ರದ ಮಟ್ಟವೆಂತಹದು ? ವಿವರಿಸಿರಿ.
೫. ನಾಟಕದ ಹೆಸರಿನ ಸಮರ್ಪಕತೆಯನ್ನು ಚರ್ಚಿಸಿರಿ.
iv ಕೆಳಗಿನ ವಾಕ್ಯಗಳನ್ನು ಸಂದರ್ಭದೊಡನೆ ಸ್ಪಷ್ಟೀಕರಿಸಿರಿ:
೧. 'ಊಟಾರೆ ಬೇಕು. ಅಡಿಗೆ ಬ್ಯಾಡ.... ಗಂಡಸರ ಮಾತೇ ಚೆಂದ'
೨. 'ಹೊಟ್ಟೆಯ ನಿಷ್ಠುರಕ್ಕೆ ಅಕ್ಕಿ ಕುದಿಸೋದು.'
೩. 'ಬುದ್ಧೀನೇ ಹೋಗೇದ ಮದಿವೆ-ಆದವ್ಯಾಲ-ಅಂತೀರಿ. ಅಷ್ಟೆ ನನ್ನ ಸುದ್ದೈವಾ.'
೪. 'ಆಕ್ರೋಶ ಅಂದರೇನು ? ಮಾಡಿಕೊಂಡ ಹೆಂಡತೀನ ಬಿಟ್ಟು ಮಂದಿಗೆ ಕೇಳಲಿಯಾ ನನ್ನ ಕೋಟು ಎಲ್ಲಿ ಇದೇ ಅಂತ?'
೫. 'ಕಣ್ಣಿನ ಅರ್ಧಾಂಗವಾಯು ಏನು ಅಲ್ಲವಲ್ಲ ?'

## ಒಂದು ಮಾತು

ಇಂದಿನ ಸಾಹಿತ್ಯದಲ್ಲಿ ಹೆಸರು ಪಡೆದ ನಾಟಕಗಳನ್ನು ಅಭಿನಯಿಸುವವರೆಂದರೆ, 'ನಾಟ್ಯವಿಲಾಸಿ'ಗಳು-ನಾಟಕ ಕಂಪನಿಯವರಲ್ಲ. ಇಂದಿನ ಕಂಪನಿಯ ನಾಟಕಗಳು ಹೇಗೋ ಜೀವ ಹಿಡಿದುಕೊಂಡು ಹಳ್ಳಿಹಳ್ಳಿಗಳಲ್ಲಿ 'ತಂಬೂ' ಹಾಕಿ-ರಂಗಭೂಮಿಯ ಸೇವೆಯನ್ನು ಮಾಡುತ್ತಿಲ್ಲ, ಜೀವನ ರಣರಂಗದ ಮೇಲೆ ತಾಂಡವವಾಡಿ 'ತುತ್ತಿನ ಚೀಲ'ಕ್ಕಾಗಿ ಹೋರಾಡುತ್ತಿವೆ. ಪಾಪ! ಇಂತಹರಿಂದ ರಂಗಭೂಮಿಯ ಸೇವೆಯನ್ನು ಅಪೇಕ್ಷಿಸುವುದು ಪಾಪದ ಕೆಲಸವಲ್ಲವೆ? ಶ್ರೀರಂಗರ ನಾಟಕ, ಕಂಪನಿ ನಟನ ತಲೆಯೊಳಗೆ ಸೇರೀತೆ? ಇದಕ್ಕಾಗಿ ಶ್ರೀರಂಗರು ಕಂಪನಿ ಹಾಗೆಯೆ ಕೆಲವೊಂದು ನಾಟಕಗಳನ್ನು ಬರೆದು ಪ್ರಯೋಗ ಮಾಡಿ ನೋಡಿದರೆ ಕಂಪನಿಗಳಿಂದ ಸಮಾಜ-ಸಾಹಿತ್ಯ-ಕಲಾಸೇವೆ ಏನಾದರೂ ಆದೀತೇನೊ ನೋಡಬೇಕು. ( ನಾನೇ ಒಂದೆರಡು ಪ್ರಯೋಗಗಳನ್ನು ಮಾಡಹೋಗಿ ನಿರಾಶನಾಗಿದ್ದೇನೆ. )

ಇನ್ನು ನಾಟ್ಯವಿಲಾಸಿಗಳ ವಿಷಯ. ಯಾವುದೊ ಸಂಘ-ಸಂಸ್ಥೆಯ ವಾರ್ಷಿಕೋತ್ಸವಕ್ಕಾಗಿ ಒಂದು ನಾಟಕ ಬೇಕಾಗುತ್ತದೆ. ಉತ್ತರ ಕರ್ನಾಟಕಕ್ಕೆ ಒಗ್ಗುವ, ಸ್ತ್ರೀಪಾತ್ರಗಳಿಲ್ಲದ ಅರ್ಧತಾಸಿನ ಹೊಟ್ಟೆತುಂಬ ನಗಿಸುವ ನಾಟಕವೊಂದು ಅವರಿಗೆ ಬೇಕಾಗುತ್ತದೆ. ಮನೆ ಮಾತೇ ನಾಟಕದ

ಮಾತು ಎಂದ, ಮೇಲೆ ‘ಫೋ[illegible]’ [illegible]ಲಿಕುವ ಕಾರಣವಿಲ್ಲ. ಸರಿ, ಬಾಯಿಗೆ ಬಂದದ್ದನ್ನೆ ಪ್ರಕಟಿಸಿದರಾಯಿತು. ಹೀಗೆ ಹೊರಡುವ ವಿಲಾಸಿಗಳೇ ಬಹಳ ಇಲ್ಲಿಯ ವರೆಗೆ ವಾರ್ಷಿಕೋತ್ಸವಗಳಲ್ಲಿ ವಿಲಾಸಿಗಳು ಮಾಡಿರುವ ಅನೇಕ ನಾಟಕಗಳನ್ನು ನಾನು ನೋಡಿದ್ದೇನೆ. ಶ್ರೀರಂಗರ ‘ಶರ–ಪಂಜರ’ದಲ್ಲಿ ಪಿಂಚಣಿಯ ಮುದುಕನನ್ನು ಶರಪಂಜರದ ಮೇಲೆ ಮಲಗಿಸುವುದಿಲ್ಲ. ನಾಟಕಕಾರನನ್ನೆ ಶರಪಂಜರದ ಮೇಲೆ ಮಲಗಿಸಿ ಬಿಡುತ್ತಾರೆ. ಭೀಷ್ಮನಂತೆ ತನ್ನ ಸಾವು ತನ್ನ ಕೈಯಲ್ಲಿದ್ದವನೆ ಇಂತಹರ ಕೈಯಲ್ಲಿ ಪಾರಾಗಬೇಕು.

ನಾಟ್ಯ ವಿಲಾಸಿಗಳು ಯಾವುದೋ ಒಂದು ನಾಟಕವನ್ನಭಿನಯಿಸಲು ಕೈಕೊಂಡಾಗ, ಮೊದಲು ನಾಟಕಕಾರನ ಅನುಮತಿಯನ್ನು ಪಡೆದುಕೊಳ್ಳುವ ಕೃಪೆಯನ್ನು ಸ್ವಲ್ಪ ಮಾಡಬೇಕು. ನಾಟಕಕಾರನು ಕೂಡಲೆ ಅಪ್ಪಣೆಯನ್ನು ಕೊಡುವನಲ್ಲದೆ ಸೂಕ್ತವಾದ ಸಲಹೆಗಳನ್ನೂ ಕೊಡುವನು. ಆ ಮೇಲೆ ಇಡಿಯ ನಾಟಕದ ಜೀವಾಳವನ್ನೂ ಕಂಡು ಹಿಡಿದುಕೊಳ್ಳುವ ಮಟ್ಟಿಗಾದರೂ ಪ್ರತಿಯೊಬ್ಬ ನಟನೂ ಇಡಿಯ ನಾಟಕವನ್ನೋದಿಕೊಳ್ಳಬೇಕು. ಬರಿ ತನ್ನ ಮಾತನ್ನಷ್ಟೆ ಅಲ್ಲ. ಆ ಮೇಲೆ ಎಲ್ಲಾ ಮಾತನ್ನು ಚೆನ್ನಾಗಿ ಕಂಠ ಪಾಠ ಮಾಡಿಕೊಳ್ಳಬೇಕು. ಇಂದಿನ ಹೊಸ ನಾಟಕಗಳಲ್ಲಿ, ಹಲ್ಲು ಕಡಿದು ಹುಬ್ಬುಗಂಟಿಕ್ಕಿ ಆಕ್ರೋಶ ಮಾಡುವಂತಹ, ಅಕೃತಕ ಅಭಿ[illegible]ವೊಂದು ಬೇಕೇಬೇಕು. ಅಭಿನಯದ ಕಾರಣವಿಲ್ಲೆಂದು ನಟನು ಕಲ್ಲುಗೊಂಬೆಗೆ ಬಾಯಿಗೆ ಬಂದಂತೆ ಮಾತಾಡಬಾರದು.

ಶ್ರೀರಂಗರ ನಾಟಕ ಸುಲಭವಾಗಿ ತಿಳಿಯುವುದಿಲ್ಲವೆನ್ನುವವರಿಗೆ ಇಲ್ಲಿ ಶ್ರೀ. ಗೋಕಾಕರ ಮುನ್ನುಡಿ ಇದೆ, ನಾಟಕಕಾರರ ನುಡಿ ಇದೆ. ನಾಟಕದ ವಿಮರ್ಶೆ-ಅರ್ಥ–ಟೀಕೆ ಟಿಪ್ಪಣಿಗಳುಳ್ಳ ಒಂದು ಹಿನ್ನುಡಿಯೂ ಇದೆ. ಇಷ್ಟೆಲ್ಲ ಸಾಧನವಿದ್ದ ಮೇಲಾದರೂ ನಾಟ್ಯ ವಿಲಾಸಿಗಳು ಇದರ ಸದುಪಯೋಗ ಮಾಡಿಕೊಂಡು ನಾಟಕ ಪ್ರಯೋಗವೆಂದರೆ ಬರಿ ಹುಡುಗಾಟಿಕೆಯೆಂದು ತಿಳಿಯದೆ, ನಿಜವಾಗಿಯೂ ಕರ್ನಾಟಕ ಪ್ರಗತಿಯ ಜೀವಾಳವೆಂದರಿತು ಕಂಕಣ ಬದ್ಧರಾದಾರೆಂದು ನಂಬುವೆ.

ಮಾಳಮಡ್ಡಿ, ಧಾರವಾಡ
[illegible]

ಎನ್. ಕೆ. ಕುಲಕರ್ಣಿ